

ಶ್ರೀ ವೆಂಕಟೇಶಾ ಸಲಹು ವೆಂಕಟೇಶಾ
ಭಾವಿಕ ಸೇವಕ ಭವಭಯನಾಶಾ

ಸುರಾರಿ ಗಜಗಳೆಂಬ ಗಣಕೆ ಕಂಠೀರವ
ಕರಿರಾಜ ಸಂಕಟ ಹರಣ ದೇವ
ಪರಮ ಭಾಗವತರ ಸಮಾಜ ಸಂಜೀವನ
ಪುರಹರವರ ಮತ್ತಾ ವೃಕಾಸುರ ಮಥನಾ

ವನಜಭವ ಸಮೀರರೊಡೆಯ ಶ್ರೀರಮಣ
ಮುನಿ ಹೃದಯದೊಡೆಯ ಪರಿಪೂರಣ
ಫಣಿವರಶಾಯಿ ಪರಾತ್ಪರ ಅಗಣಿತ
ಗುಣ ಗಂಭೀರ ಸಜ್ಜಗದ ದಾತ

ಶುಕ ಶೌನಕ ಸನಕಾದಿ ಋಷಿ
ಸಕಲ ಸುರ ಭೂಪರ ರಾಜಾಧೀಶ
ಭಕುತರ ವತ್ಸಲ ಬಾದರಾಯಣ ಹರಿಹಯ
ಮುಖ ಪ್ರಸನ್ವೆಂಕಟ ಗಿರಿ ನಿಲಯ

-ಶ್ರೀ ಪ್ರಸನ್ನ ವೆಂಕಟದಾಸರು.

ಸಂದರ್ಶಿಸಿ. ಆನಂದಿಸಿ.

## ಶ್ರೀ ವೆಂಕಟೇಶ್ವರಸ್ವಾಮಿ ಆಲಯ
## ತಿರುಮಲೆ

# ವಾರ್ಷಿಕ ಪವಿತ್ರೋತ್ಸವ

## 23-8-96 ರಿಂದ 26-8-96 ವರೆಗೆ

| | | |
|---|---|---|
| 23-8-96 | ಶುಕ್ರವಾರ | ಅಂಕುರಾರ್ಪಣೆ. |
| 24-8-96 | ಶನಿವಾರ | ಪವಿತ್ರ ಪ್ರತಿಷ್ಠೆ |
| 25-8-96 | ಭಾನುವಾರ | ಪವಿತ್ರ ಸಮರ್ಪಣೆ |
| 26-8-96 | ಸೋಮವಾರ | ಪೂರ್ಣಾಹುತಿ |

ಶ್ರಾವಣಮಾಸದಲ್ಲಿ ನಡೆಯುವ ಈ ಪವಿತ್ರೋತ್ಸವದಲ್ಲಿ ಗೃಹಸ್ಥರು ಆರ್ಜಿತ ಸೇವೆಯನ್ನಾಗಿಯೂ ಇದನ್ನು ನಡೆಸಲು ಅವಕಾಶವಿದೆ. ವಿವರಗಳಿಗಾಗಿ ತಮ್ಮ ಬಳಿಯ ತಿ.ತಿ.ದೇ. ವಿಚಾರಣಾ ಕೇಂದ್ರದಲ್ಲಿ ವಿಚಾರಿಸಿ.

ನೀವೂ ಬನ್ನಿ ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ.

ಸಂದರ್ಶಿಸಿ. ಆನಂದಿಸಿ.

## ಶ್ರೀ ಗೋವಿಂದರಾಜಸ್ವಾಮಿ ಆಲಯ
## ತಿರುಪತಿ

# ಜ್ಯೇಷ್ಠಾಭಿಷೇಕ ಮಹೋತ್ಸವ

## 25-7-96 ರಿಂದ 27-7-96 ವರೆಗೆ



ಆಷಾಢಮಾಸದ ಜ್ಯೇಷ್ಠಾನಕ್ಷತ್ರದಲ್ಲಿ ನಡೆಯುವ ಜ್ಯೇಷ್ಠಾಭಿಷೇಕ ಮಹೋತ್ಸವದಲ್ಲಿ 25-7-96 ರಂದು ಆರಂಭವಾಗಿ, 26-7-96 ರಂದು ಕವಚ ಪ್ರತಿಷ್ಠೆಯೂ 27-6-96 ರಂದು ಕವಚ ಸಮರ್ಪಣೆಯೂ ನಡೆಯುತ್ತದೆ.

ನೀವೂ ಬನ್ನಿ. ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ.





ಲೇಖನ/ಜಾಹೀರಾತುಗಳಿಗೆ
ಮಿಕ್ಕವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ||

ಸಂಪುಟ -- 27 ಜೂನ್ 1996 ಸಂಚಿಕೆ --1

# ವಿಷಯಸೂಚಿ



ಮುಖ ಚಿತ್ರ : ಆನಂದನಿಲಯದೊಡನೆ ತಿರುಮಲೆಯ ಆಲಯದ ನೋಟ.

ಹಿಂಬದಿಯಲ್ಲಿ : ಅಪ್ಪಲಾಯಗುಂಟದ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ.

ಒಳಗಡೆ : 1) ಪೆರಿಯಾಳ್ವಾರ್.
2) ಹೃಷೀಕೇಶದ ಶ್ರೀ ವೆಂಕಟೇಶ್ವರಸ್ವಾಮಿ ಆಲಯ.




ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಬಗ್ಗೆ ವಿವರಗಳನ್ನು ನೀಡುವ ಪ್ರಚಾರಪತ್ರವಾಗಿ, ಪ್ರಸಿದ್ಧ ಪತ್ರವಾಗಿ, ಸಾವಿರದ ಒಂಭೈನೂರ ನಲವತ್ತೊಂಬತ್ತರಲ್ಲಿ ಆರಂಭವಾದ ತಿ. ತಿ. ದೇವಸ್ಥಾನಗಳ ಬುಲೆಟಿನ್ ಕಾಲಕ್ರಮದಲ್ಲಿ ತನ್ನ ರೂಪವನ್ನು ಹೆಸರನ್ನು ಉದ್ದೇಶಗಳನ್ನು ಉನ್ನತಿಗೇರಿಸಿಕೊಂಡು, 1970 ರಲ್ಲಿ ಸಪ್ತಗಿರಿಯಾಗಿ ಗಟ್ಟಿಯಾಯಿತು. ಇಂದಿಗೆ 26 ವರ್ಷಗಳಲ್ಲಿ 26 ಸಂಪುಟಗಳಾಗಿ 27 ನೆಯದರಲ್ಲಿ ಕಾಲಿಟ್ಟಿದೆ. ಸನಾತನ ಧರ್ಮದ ಸುಳುಹು, ಸೂಕ್ಷ್ಮಗಳನ್ನು, ಆದರ್ಶ, ಔನ್ನತ್ಯಗಳನ್ನು, ತಿರುಮಲೆಯಪ್ಪನ ತಿಳಿವನ್ನು, ಸಂದೇಶವನ್ನು ಹೊತ್ತು ನಡೆದು ಐದು ಭಾಷೆಗಳಲ್ಲಿ ತಿರುಮಲೆಯ ಯಾತ್ರಿಕರನ್ನು, ಭಕ್ತರನ್ನು ಆಕರ್ಷಿಸುತ್ತ, ನಡೆದಿದೆ ಎಂದರೆ 'ಅವನ' ಕೃಪೆಯೊಡನೆ ಓದುಗರ ಆದರವೂ ಕಾರಣವೆಂದು ಹೇಳಬರುತ್ತದೆ.

'ಅವನ' ಕೃಪೆಯೆಂದೆವು, ಕಾರಣ ಸಪ್ತಗಿರಿಯ ತಯಾರಿಕೆಯಲ್ಲೂ, ವಿತರಣೆಯಲ್ಲೂ ಇರುವ ಅಧಿಕ ಆರ್ಥಿಕ ಆಲಂಬನ. ಪತ್ರಿಕೆಯ ತಯಾರಿಕಾ ವೆಚ್ಚಗಳು ಅದರ ಮಾರಾಟದ ಬೆಲೆಗಿಂತ ಹೆಚ್ಚಾದರೂ ಓದುಗರಿಗೆ ಅದು ವೆಂಕಟೇಶ್ವರಸ್ವಾಮಿಯ ಕಡೆಯಿಂದ ಸಂದ ಉಡುಗೊರೆಯಂತೆ ಅದರ ಬೆಲೆ. ಮಾರ್ಕೆಟ್ಟಿನ ಮಾಸಪತ್ರಿಕೆಗಳೆಲ್ಲದರ ಬೆಲೆಯೇರಿದಾಗಲೂ ಸಪ್ತಗಿರಿಯ ಬೆಲೆ ಸರಸ - ಸರಳವಾಗಿದ್ದು ಅತಿ ಕಡಮೆ ರೂಪಾಯಿ ಮೌಲ್ಯದಲ್ಲಿ, ಅತಿಹೆಚ್ಚಿನ ಶಾಶ್ವತ ಮೌಲ್ಯದ ಧಾರ್ಮಿಕ ಸಾಹಿತ್ಯವನ್ನು ಒದಗಿಸಿದೆಯೆಂದರೆ ಅದು ಅವನ ಕೃಪೆಯಲ್ಲದೆ ಮತ್ತೇನು! ಈಚೆಗೆ ಬಿಡಿಪ್ರತಿಯ ಬೆಲೆ ನಾಲ್ಕು ರೂಪಾಯಿಗಳೆಂದು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಈ ಮಾತು ಅರ್ಥಪೂರ್ಣ ಆಗುತ್ತದೆ. ಈಗಣ ಹೆಚ್ಚಿರುವ ಬೆಲೆಯಲ್ಲೂ - ನಾಲ್ಕು ರೂಪಾಯಿಗಳಲ್ಲೂ - ಸಪ್ತಗಿರಿಯ ಉತ್ಪಾದನಾ ವೆಚ್ಚವನ್ನು ಸಮತೋಲನ ಮಾಡಲಾಗಿಲ್ಲ ಎಂಬುದನ್ನು ಓದುಗರು ಗಮನಿಸಬೇಕು.

ಓದುಗರು ಎಂದೆವು, ಕಟ್ಟಿಯುಮೇನೋ - ಮುಡಿವ ಭೋಗಿಗಳಿಲ್ಲದೆ, ಯಾವುದೇ ಪತ್ರಿಕಾ ಪುಷ್ಪವೂ ಅರಳುವುದು ಓದುಗರ ಹೃತ್ಸರಸಿಯಲ್ಲಿ ಎಂದಾಗ ಓದುಗರ ಅನಿವಾರ್ಯ ಅಗತ್ಯ ಅವಧಾರಿತವಾಗುತ್ತದೆ. ಆಗಾಗ ಉಂಟಾಗುವ ಯಂತ್ರೋಪಕರಣ, ವಿತರಣಾಯಂತ್ರಾಂಗ ವಿಷಮತೆಗಳು ಜೊತೆಗೂಡಿದಾಗಲಂತೂ ಓದುಗರ ಸಹನೆ ಪರೀಕ್ಷೆಗೀಡಾಗಿ ಸಂಬಂಧಿತ ವಸ್ತು ವಿಷಯಗಳಿಗೆಲ್ಲ ಧಿಕ್ಕೆಂದರೂ ಸಪ್ತಗಿರಿಯನ್ನು ಕಂಡು, ಕೊಂಡಿದ್ದಾರೆ - ಅದರ ಅಂತರಂಗವನ್ನು ಕಂಡುಕೊಂಡಿದ್ದಾರೆ. ಅನೇಕ ವೇಳೆ ಮಾಸಪತ್ರಿಕೆ ನಂತರದ ಮಾಸಪತ್ರಿಕೆಯಾದಾಗಲೂ ಮಾಸದ ಅಕ್ಕರೆಯಿಂದ ಆದರಿಸಿ ಓದಿದ್ದಾರೆ. ಅದಕ್ಕಾಗಿ ಸಪ್ತಗಿರಿ ಅನಂತ ಕೃತಜ್ಞತೆಗಳನ್ನು ಅರ್ಪಿಸುತ್ತ ಮುಂದುವರೆಯುತ್ತದೆ, ತನ್ನ ಪೂರ್ವನಿಶ್ಚಿತ ಶ್ರೀ ವೆಂಕಟೇಶ್ವರಸ್ವಾಮಿ ಸಂದೇಶವಾಹಕ ಕಾರ್ಯದಲ್ಲಿ.

ಇಪ್ಪತ್ತೇಳನೇ ವರ್ಷಕ್ಕೆ ಬಂದಿದ್ದೇವೆ. ಓದುಗರನ್ನು ಶೀಘ್ರವಾಗಿ, ಸಕಾಲದಲ್ಲಿ, ಸರಿಯಾಗಿ ತಲುಪಲು ಪ್ರಯತ್ನಿಸುತ್ತಿದ್ದೇವೆ. ಇದಕ್ಕಾಗಿ ವಿಳಾಸಗಳನ್ನು ಕಂಪ್ಯೂಟರೀಕೃತಗೊಳಿಸುತ್ತಿದ್ದೇವೆ ಎಂಬುದು ಓದುಗರಿಗೆ ಈಗಾಗಲೇ ತಿಳಿದಿರುವ ಸಂಗತಿ. ವರ್ಷದಲ್ಲಿ ಒಂದೆರಡು ಸಂಚಿಕೆಗಳನ್ನು ಒಂದೊಂದು ವಿಷಯಕ್ಕೆ ಮೀಸಲಿಟ್ಟು ಹೆಚ್ಚಿನ ಸಾಹಿತ್ಯವನ್ನು ಒಂದೇ ವಿಷಯದ ಬಗ್ಗೆ ಕ್ರೋಢೀಕರಿಸಿ ನೀಡುವ ಯೋಜನೆಯೂ ಇದೆ. ಮುಂದಿನ ಸಂಚಿಕೆ - ಯಾಮುನರ ಬಗ್ಗೆ. ಬ್ರಹ್ಮೋತ್ಸವ, ಪುರಂದರದಾಸರು, ಅನ್ನಮಾಚಾರ್ಯ, ಆಲಯಗಳು - ಹೀಗೆ ಸಂಚಿಕೆಗಳನ್ನು ಕೊಡುವ ಉದ್ದೇಶವೂ ಉಂಟು; ಓದುಗರ ಸಲಹೆ, ಸೂಚನೆ ಮಾರ್ಗದರ್ಶನ ಸರ್ವದಾ ಅಗತ್ಯ ಎಂಬುದನ್ನು ಅವಧಾರಿಸಿ ಹೇಳಬೇಕಿಲ್ಲ.

ಶ್ರೀನಿವಾಸನ ಸೇವೆಯಲ್ಲಿ,

ಸಂಪಾದಕ, ಸಪ್ತಗಿರಿ.

* * *

# ಅಪ್ಪಲಾಯಗುಂಟ

---ಜಿ. ಬಾಲಸುಬ್ರಹ್ಮಣ್ಯಂ.



ಭಕ್ತರ ಪಾಲಿಗೆ ಸೆರಗಿನ ಸಿರಿಯಾಗಿ ಬೆಳಗುತ್ತಿರುವ ಮನೆದೇವರು ಮನದೇವರು ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ಪ್ರತಿರೂಪವಾದ ಅರ್ಚಾಮೂರ್ತಿಗಳು ಪ್ರಾಚೀನಕಾಲದಿಂದಲೂ.ದೇಶದ ನಾಲ್ಕು ಮೂಲೆಗಳಲ್ಲೂ ಪ್ರತಿಷ್ಠಾಪಿಸಲ್ಪಟ್ಟಿವೆ. ವಿದೇಶಗಳಲ್ಲೂ ಪ್ರತಿಷ್ಠಾಪಿತವಾಗುತ್ತಿವೆ. ಅಂತಹದ್ದೇ ಒಂದು ಪ್ರತಿರೂಪ ಅಪ್ಪಲಾಯಗುಂಟದ ಶ್ರೀ ವೆಂಕಟೇಶ್ವರಸ್ವಾಮಿ.

ತಿರುಪತಿಗೆ ಹದಿನೈದು ಕಿ.ಮೀ. ದೂರದಲ್ಲಿ ಬೆಟ್ಟಗಳ ನಡುವೆ ಹಸಿರು ಹೊಲಗಳು, ದೊಡ್ಡತಾವರೆಯ ಕೊಳ - ಹೀಗೆ ಆಹ್ಲಾದಕರವಾದ ವಾತಾವರಣದಲ್ಲಿದೆ ಅಪ್ಪಲಾಯಗುಂಟ. ಈ ಗ್ರಾಮದಲ್ಲಿನ ಆಲಯವನ್ನು ನೋಡಿದರೆ, ಉತ್ಸವಗಳಿಂದ ಮೆರವಣಿಗೆಗಳಿಂದ ಒಂದೊಮ್ಮೆ ವೈಭವದಿಂದ ಮೆರೆದು ಚರಿತಾರ್ಥವಾಗಿ ಕಾಲಗರ್ಭದಲ್ಲಿ ಹಿಂದೆ ಬಿದ್ದ ಆಲಯವಿದು ಎನ್ನಿಸದಿರದು.

ಕಲಿಯುಗಾರಂಭದಲ್ಲಿ ಸುಮಾರು ನಾಲ್ಕುಸಾವಿರ ವರ್ಷಗಳ ಹಿಂದೆ ನಾರಾಯಣವನವನ್ನು ಪರಿಪಾಲಿಸುತ್ತಿದ್ದ ಆಕಾಶರಾಜನ ಮಗಳು ಪದ್ಮಾವತಿಯನ್ನು ವಿವಾಹವಾದ ಶ್ರೀ ವೆಂಕಟೇಶ್ವರಸ್ವಾಮಿ ಸಪ್ತಗಿರಿಯನ್ನೇರುವ ಮೊದಲು ಪದ್ಮಾವತಿಯೊಡನೆ ಅಪ್ಪಲಾಯಗುಂಟ ಸಮೀಪದ ಬೆಟ್ಟದ ತಪ್ಪಲಿನಲ್ಲಿ ವಿವಾಹಹೊಂದಿದ. ಸ್ವಲ್ಪಕಾಲದ ನಂತರ ಅಲ್ಲಿರುವ ಯೋಗುಲ ಕೊಂಡದ ಸಿದ್ದೇಂದ್ರನೆಂಬ ಯೋಗಿ ಸ್ವಾಮಿದರ್ಶನವನ್ನು ಬಯಸಿ ತಪಸ್ಸು ಮಾಡಿದ. ಅವನ ತಪಸ್ಸಿಗೆ ಮೆಚ್ಚಿ ದರ್ಶನ ವಿತ್ತ ಸ್ವಾಮಿ ಆತನ ಕೋರಿಕೆಯಂತೆ ಆ ಬೆಟ್ಟದ ತಪ್ಪಲಿನಲ್ಲಿ ಪ್ರಸನ್ನ ವೆಂಕಟೇಶ್ವರನಾಗಿ ನೆಲೆನಿಂತ. ಅಂದಿನ ಯೋಗುಲಕೊಂಡ ಈಗ ವೇಮುಲಕೊಂಡ ಎಂಬ ಹೆಸರಿನಲ್ಲಿ ವ್ಯವಹಾರದಲ್ಲಿದೆ.

ಒಂದೊಮ್ಮೆ ಅಪ್ಪಲಯ್ಯ ಎನ್ನುವ ಭಕ್ತ ತಿರುಮಲೆಗೆ ಹೋಗುತ್ತ ದಾರಿಯಲ್ಲಿ ಈ ಊರಿನ ಬಳಿ ವಿಶ್ರಾಂತಿ ಪಡೆದು, ನಿದ್ದೆ ಮಾಡಿ, ಎದ್ದನಂತರ ತನ್ನ ಹಣದ ಚೀಲವನ್ನು ಮರೆತು ಮುಂದುವರೆದ. ದಾರಿಯಲ್ಲಿ ನೆನಪಿಗೆ ಬಂದು, ಸ್ವಾಮಿಗೆ ಹರಕೆಹೊತ್ತು ಹಿಂದಿರುಗಿ ಬಂದು ತನ್ನ ಹಣದ ಚೀಲವನ್ನು ತಾನು ಮಲಗಿದ ಸ್ಥಳದಲ್ಲಿಯೇ ಕಂಡು, ಹರಕೆಯಂತೆ, ಇಲ್ಲೊಂದು ಕೊಳವನ್ನು ಕಟ್ಟಿಸಿದ. ಅಪ್ಪಲಯ್ಯ ಕಟ್ಟಿಸಿದ ಕೊಳ ಅಪ್ಪಲಯ್ಯನಕೆರೆಯಾಗಿ ಅಪ್ಪಲಾಯಗುಂಟವಾಯಿತು.

ಮತ್ತೊಂದು ಕಥೆ - ಆ ಗ್ರಾಮಸ್ಥರು ಒಂದು ಕೊಳ ಕಟ್ಟಿಸಿದರು. ಕೆಲಸ ಆರಂಭಿಸಿದ ದಿನದಿಂದ ಆಯಾ ದಿನವೇ ಕೆಲಸಗಾರರಿಗೆ ಕೂಲಿ ಹಣವನ್ನು ಸಂದಾಯ ಮಾಡಿದರು. ಎಂದರೆ ಮುಂದಿನ ದಿನಕ್ಕೆ ಸಾಲವಿಡದೆ - ಅಪ್ಪು - ಇಡದೆ ಕಟ್ಟಿಸಿದ ಕೊಳ - ಅಪ್ಪಲೇನಿಗುಂಟ - ಅಪ್ಪಲಾಯಗುಂಟ ಆಯಿತು.

ಪ್ರಾಚೀನ ಕವಿ ವಾಕ್ಕಿನಲ್ಲಿ, ಶಾಸನಗಳಲ್ಲೂ, ಅಪ್ಪಲೇನಿಗುಂಟ - ಸಂಸ್ಕೃತೀಕರಣ ಹೊಂದಿ ಅನ್ನಣಸರೋವರವಾಗಿದೆ. ಹಾಗಾಗಿ ಎರಡನೇ ಕಥೆಗೇ ಬೆಲೆ ಹೆಚ್ಚುವುದು.

ಸುಮಾರು ಸಾವಿರಕ್ಕೂ ಹೆಚ್ಚು ವರ್ಷ ಪ್ರಸಿದ್ಧವಾದ ಕಾರ್ವೇಟಿ ನಗರದರಸರ ಅಧೀನವಲ್ಲಿ ಅಪ್ಪಲಾಯಗುಂಟ ಇದ್ದಿತೆನ್ನಲು ಶಾಸನಾಧಾರಗಳಿವೆ. ಇವರ ರಾಜ್ಯಕ್ಕೆ ವಾಯುವ್ಯ ದಕ್ಷಿಣಗಳಲ್ಲಿ ಉತ್ತರ ಆರ್ಕಾಟು, ಪೂರ್ವದಲ್ಲಿ ಚೆಂಗಲ್‌ಪೇಟೆ, ಈಶಾನ್ಯದಲ್ಲಿ ಶ್ರೀ ಕಾಳಹಸ್ತಿ ರಾಜ್ಯಗಳು ಎಲ್ಲೆಗಳಾಗಿದ್ದವು. ಎಂದರೆ ತಿರುಮಲೆ, ತಿರುಪತಿ, ತಿರುಚಾನೂರು, ನಾಗಲಾಪುರ, ನಾರಾಯಣವನ, ತಿರುತ್ತಣಿ, ಷೋಲಿಂಗರ್ ಮೊದಲಾದ ಪ್ರಸಿದ್ಧ ಆಲಯಗಳೂ ೯೦೦ ಗ್ರಾಮಗಳೂ ಇವರ ಪಾಲನೆಗೆ ಒಳಪಟ್ಟಿದ್ದವು ಎಂದು ಚರಿತ್ರೆ ಹೇಳುತ್ತದೆ.

ಕಾರ್ವೇಟಿ ನಗರ ಪ್ರಭುತ್ವದಲ್ಲಿ ಕಟಾರಿ ಸಾಳ್ವ ಮಾಕರಾಜ ಶ್ರೀ ವೆಂಕಟ ಪೆರುಮಾಳ್ ರಾಜ ಅತ್ಯಂತ ಪ್ರಸಿದ್ಧ. ಮೇಲಾಗಿ ಈತ ಶ್ರೀ ವೆಂಕಟೇಶ್ವರಸ್ವಾಮಿಯ ಭಕ್ತ. ಈ ರಾಜ ಅಪ್ಪಲಾಯಗುಂಟದ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿಗೆ ದಾನ ದತ್ತಿಗಳನ್ನಿತ್ತು ಉತ್ಸವ, ಹಬ್ಬ ಹರಿದಿನಗಳನ್ನು ನಿರ್ವಹಿಸಿದ. ಈ ವೆಂಕಟ ಪೆರುಮಾಳ್ ರಾಜ ಕ್ರಿ. ಶ. ೧೭೫೦ರ ಹೊತ್ತಿಗೆ ಐದು ಅಡಿ ಎತ್ತರದ ಎರಡು ದೀಪದ ಕಂಭಗಳ ಕಾಣಿಕೆ ನೀಡಿದ್ದನ್ನು ಈಗಲೂ ಅಪ್ಪಲಾಯಗುಂಟ ಆಲಯದಲ್ಲಿ ಕಾಣಬಹುದಾಗಿದೆ. ಈ ದೀಪದ ಕಂಬಗಳ ಮೇಲಿನ ಶಾಸನ ಪಾಠ ಹೀಗಿದೆ.

"ಶ್ರೀ ಅಕ್ಷಯ ಸಂವತ್ಸರ ವೈಶಾಖ ಶುದ್ಧ ೧೫ ಅನ್ನಣ ಸರೋವರ ನಗರಾಧೀಶ್ವರ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಸನ್ನಿಧೌ, ಶ್ರೀ ಮಹಾ ಮಂಡ ಲೇಶ್ವರ ಕಟಾರಿ ಸಾಳ್ವ ಮಾಕರಾಜ, ಶ್ರೀ ವೆಂಕಟಪೆ ರುಮಾಳ್ ರಾಜ ದೇವ ಮಹಾರಾಜ ಸಮರ್ಪಿತಾ ಖಂಡ ದೀಪಿಕಾಸ್ತಂಭೋವಿಜಯತೇ ತರಾಂ"

ಈ ಶಾಸನದ ಎಡಭಾಗದಲ್ಲಿ ಖಡ್ಗದ ಗುರುತೂ ಆ ಖಡ್ಗದ ಎರಡೂ ಕಡೆ ಸೂರ್ಯಚಂದ್ರ ಮುದ್ರೆ ಗಳೂ ಖಡ್ಗದ ಮೊನೆಯ ಕೆಳಗೆ ವರಾಹಮು ದ್ರೆಯೂ ಚಿತ್ರಿಸಲ್ಪಟ್ಟಿದೆ.

ಈ ಮಾಕರಾಜ ವೆಂಕಟಪೆರುಮಾಳ್ ರಾಜ ಕವಿ ಪಂಡಿತನೇ ಅಲ್ಲದೆ ಕವಿ ಪೋಷಕನೂ ಆಗಿದ್ದ. ಅಷ್ಟದಿಗ್ಗಜಗಳೆಂಬ ಕವಿಗಳನ್ನು ತನ್ನ ಆಸ್ಥಾನದಲ್ಲಿ ಹೊಂದಿದ್ದ. ಅವರಲ್ಲಿ ಪ್ರಸಿದ್ಧನಾದ ವಾಗ್ಗೇಯಕಾರ ಸಾರಂಗಪಾಣಿಯೂ ಒಬ್ಬ. ಈತನ ಹಾಡುಗಳು ಸಾರಂಗಪಾಣಿ ಪದಗಳೆಂದೇ ಪ್ರಸಿದ್ಧ. ಈ ಸಾರಂ ಗಪಾಣಿಯ ಪದಗಳಲ್ಲಿ ಅಪ್ಪಲಾಯಗುಂಟದ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿಗೇ ಆದ್ಯತೆ.

ಘಂಟರಾಗ - ಆದಿತಾಳ

ದಳದಳ ವೆಂದು ಹಾರುತಿದೆ ಹೃದಯ
ತಾಳಲಾರೆನೇ ನಿನ್ನಾಣೆಗೂ || ಪ ||

ಕುಟಿಲ ಕುಂತಲ ನನ್ನಣ ಸರೋವರ
ವಿಹಾರಿ ಪ್ರಸನ್ನ ವೆಂಕಟ ಶೌರಿ ಮುನ್ನ
ಕ್ಷಣದಲ್ಲಿ ಮೋಹಗೊಳಿಸಿ ಹೋದನೆ
ಹೇಗೆ ಸಹಿಸಲಿ ಹೇಳೆ ನನ್ನೆದೆಯಲಿ

ಮುಖಾರಿ ರಾಗ - ತ್ರಿಪುಟ ತಾಳ

ಅಪರೂಪವಲ್ಲವಯ್ಯ ನಾನೊಪ್ಪೆನಮ್ಮ
ಆತ ನಿಲ್ಲಿಗೆ ಬಂದದ್ದು || ಪ ||

ಸರಸಿಜ ಮುಖಿ-ಅನ್ನಣ ಸರಸೀತಟವಾಸಿ
ಪರಮಾತ್ಮನಾದಂತ ಪ್ರಸನ್ನವೆಂಕಟಶೌರಿ

-ಸಾರಂಗಪಾಣಿಯ ಕಾಲವನ್ನು ಕ್ರಿ.ಶ. ೧೬೮೦ ರಿಂದ ೧೭೫೦ ಎಂದು ನಿರ್ಣಯಿಸಿ ಈತ ಕಾರ್ವೇಟಿ ನಗರದ ಪ್ರಭುವಾದ ವೆಂಕಟ ಪೆರುಮಾಳ್ ರಾಜನ ಆಸ್ಥಾನದಲ್ಲಿದ್ದನೆಂದು ನಿರ್ದ್ವಂದ್ವವಾಗಿ ಹೇಳಲಾ ಗಿದೆ. ಸಾರಂಗಪಾಣಿ ತನ್ನ ಪ್ರಭುವಾದ ಮಾಕರಾ ಜನ ಬಗ್ಗೆಯೂ ಹಾಡಿದ್ದಾನೆ.

ಜೇನಿನಂತೆ ನುಡಿಯದಿರು ತಿಳಿದಿದೆ ನಿನ್ನಮನ
ಮಾನಿನೀ ಮನೋಹರ ಶ್ರೀಸಾಳುವ
ಮಾಕರಾಜ - ಕಾರ್ವೇಟಿ ರಾಜೇಂದ್ರ || ಪ ||

ಶಾಸನೋಕ್ತನೂ, ಸಾರಂಗಪಾಣಿ ಕೀರ್ತಿಸಿದ ವನೂ ಆದ ಮಾಕರಾಜ ಒಬ್ಬನೇ ಎಂಬುದು ಸಿದ್ಧ. ಆದರೆ ಇದಕ್ಕೂ ಮೊದಲು ಕಾರ್ವೇಟಿನಗರದಲ್ಲಿ ಒಬ್ಬ ಪ್ರಸನ್ನ ವೆಂಕಟೇಶ್ವರನಿದ್ದಂತೆ ತಿಳಿದು ಬರು ತ್ತದೆ.

ಋಗ್ವೇದಿ ವೆಂಕಟಾಚಲಕವಿ ತಾನು ಬರೆದ ಚಂಪೂರಾಮಾಯಣವನ್ನು ವೆಂಕಟ ಪೆರಮಾಳ್ ರಾಜನ ಅಣ್ಣ ಕಸವರಾಜನಿಗೆ ಅಂಕಿತಗೊಳಿ, ಅದರಲ್ಲಿ ತಾನು ಬರೆದ ವೆಂಕಟೇಶ್ವರಾಷ್ಟಕದ ಗಣ ಪದ್ಯವನ್ನು ಕಸವ ರಾಜನ ಎದುರಿಗೆ ವಾಚಿ ಎಂದು ಕವಿಯೇ ಚಂಪೂರಾಮಾಯಣದಲ್ಲಿ ಹೇ ಕೊಂಡಿದ್ದಾನೆ.

ದೇರ್ವೇರೆ ಶಿವ ನೆಂದು ವಿಷ್ಣುವೆಂದಾ
ದಿನದೊಳು ಕಾವೇರಿ
ಜೋರ್ವೀನಾಥ ಕುಮಾರ ನೀ ಕಸವರಾಜ
ನುತ್ಸವ ವೃತ್ತಿಯಿನ್ ಧ
ಗೀರ್ವಾಣ ಪ್ರಕರಂ ಪ್ರಶಂಸಿಸಲು ಭಕ್ತಿಲಿ
ಸಂಪ್ರತಿಷ್ಠಿಸಿ
ಕಾರ್ವೇಟೀ ಪ್ರಸನ್ನ ವೆಂಕಟ ರಮಾಕಾಂತ
ಮನೋವಲ್ಲಭ

ಈ ಪದ್ಯದಿಂದ ಆ ದಿನಗಳಲ್ಲೇ ಕಾರ್ವೇಟಿನ ದಲ್ಲಿ ಒಬ್ಬ ಪ್ರಸನ್ನ ವೆಂಕಟೇಶ್ವರ ಪ್ರತಿಷ್ಠಾಪಿತನ ದ್ದನೆಂಬುದು ಸ್ಪಷ್ಟ. ಇದು ಕಾರ್ವೇಟಿನಗರದ ಮಕ್ಕೆ ಇದ್ದಿತೆಂಬುದು ಜನಶ್ರುತಿ. ಇಂದು ಆ ದೇ ಲಯ ಕಂಡುಬರದು. ಕಾರ್ವೇಟಿನಗರದ ಪ್ರ ವೆಂಕಟೇಶ್ವರ ಸ್ವಾಮಿಯನ್ನೆ ಅಪ್ಪಲಾಯಗುಂ ಸಾಗಿಸಿ ಪ್ರತಿಷ್ಠಿಸಿದರು ಎಂಬ ಜನ ಶ್ರುತಿಯೂ ಇ ಇದು ಇನ್ನೂ ಪರಿಶೋಧನವಾಗಬೇಕಾದ ಅಂ

ಇದಕ್ಕೂ ಬಹಳ ಹಿಂದೆ ಕ್ರಿ. ಶ. ೧೬ನೇ ಕದಲ್ಲಿ ತಾಳ್ಳಪಾಕ ಅನ್ನಮಾಚಾರ್ಯರ ಮೊವ ಚಿನ ತಿರುಮಲಾಚಾರ್ಯ ಒಬ್ಬ ಪ್ರಸನ್ನ ವೆಂಕ



ಶ್ವರಸ್ವಾಮಿಯನ್ನು ಸ್ತುತಿಸಿದ್ದಾನೆ. ಆದರೆ ಊರಿನ ಹೆಸರನ್ನು ತಿಳಿಸಿಲ್ಲ.

ನಾದ ನಾಮಕ್ರಿಯ

ಸಾವಿರ ಸಾವಿರ ಕರಗಳವನಿವನೆ ಇವನೇ!
ದೇವರು ತಾನಲ್ಲವೇ ಪ್ರಸನ್ನ
ತಿರುವೆಂಗಳಪ್ಪನು || ಪ ||

ಹಾಡಿನ ಮೂರೂ ಚರಣಗಳಲ್ಲಿಯೂ ಪ್ರಸನ್ನ ತಿರುವೆಂಗಳಪ್ಪ ಬಂದರೂ, ಆತನ ಊರು ತಿಳಿಯದಾಗುತ್ತದೆ. ಆದರೂ ಆ ಪ್ರಸನ್ನ ವೆಂಕಟರಮಣ ಅಪ್ಪಲಾಯಗುಂಟದವನಲ್ಲವೆನ್ನಲೂ ಆಧಾರಗಳಿಲ್ಲ.

ಈಚಿನವರೆಗೆ ಎಂದರೆ ಆಂಗ್ಲರ ಕಾಲದವರೆಗೆ ಕಾರ್ವೇಟಿನಗರದ ರಾಜರೇ ಅಪ್ಪಲಾಯಗುಂಟದ ದೇವಾಲಯದ ಧರ್ಮಕರ್ತರಾಗಿದ್ದರು.

ಸ್ವಾತಂತ್ರ್ಯಾನಂತರ ತಿರುತ್ತಣಿ ಆಲಯದ ಅಧೀನದಲ್ಲಿ ಈ ಆಲಯನಿರ್ವಹಣಾಧಿಕಾರ ಕೆಲಕಾಲ ವಿದ್ದಿತು.

## ದೇವಾಲಯ ವಿವರ :

ಪೂರ್ವಾಭಿಮುಖವಾಗಿ ನಿರ್ಮಾಣವಾಗಿರುವ ಈ ಆಲಯದ ಸುತ್ತಲೂ ಇಟ್ಟಿಗೆಯಿಂದ ನಿರ್ಮಿತವಾದ ವಿಶಾಲ ಪ್ರಾಂಗಣವಿದೆ. ಪ್ರವೇಶದ್ವಾರದ ಬಳಿ ಮಹಾದ್ವಾರ ಗೋಪುರ ನಿರ್ಮಾಣಕ್ಕೆ ಅನುಕೂಲವಾಗಿ ನಿರ್ಮಿಸಿದ ತಳಗಟ್ಟು ಅರ್ಧದಲ್ಲಿಯೇ ನಿಂತು ಹೋಗಿದೆ. ಈ ಪ್ರವೇಶದ್ವಾರ ದಾಟಿದ ನಂತರ ಹತ್ತು ಅಡಿ ದೂರದಲ್ಲಿ ಧ್ವಜಸ್ತಂಭ ಅದರ ಬಳಿಯೇ ಗರುಡ ಮಂಟಪ ಪಶ್ಚಿಮಾಭಿಮುಖವಾಗಿ ಎಂದರೆ ಪ್ರಸನ್ನ ವೆಂಕಟೇಶ್ವರನತ್ತ ಮುಖಮಾಡಿದೆ. ಈ ಗರುಡ ವಿಗ್ರಹ ತಿರುಮಲೆ ತಿರುಪತಿ ಆಲಯಗಳಲ್ಲಿರುವಂತೆಯೇ ಇದೆ.

ಮೊದಲ ಪ್ರಾಕಾರದ ಒಳಗೆ ಅಸಂಪೂರ್ಣವಾಗಿ ನಿಂತು ಹೋಗಿರುವ ಇನ್ನೊಂದು ಪ್ರಾಕಾರವೂ ದೇವಾಲಯದ ಒಳಗಡೆ ಇದೆ. ಇದರ ಎತ್ತರ ಎರಡಡಿ ಮಾತ್ರವೇ.

ಈ ಎರಡನೆಯ ಪ್ರಕಾರದ ಒಳಗಡೆ ಪ್ರದಕ್ಷಿಣಾ ವಲಯದಲ್ಲಿ ನೈರುತ್ಯದಲ್ಲಿ ಶ್ರೀ ಪದ್ಮಾವತೀ ಅಮ್ಮನವರ ಮಂಟಪ, ವಾಯುವ್ಯದಲ್ಲಿ ಶ್ರೀ ಗೋದಾದೇವಿ ಮಂಟಪಗಳಿವೆ. ಇಲ್ಲಿನ ಪದ್ಮಾವತೀ ಅಮ್ಮನವರ ವಿಗ್ರಹ ತಿರುಚಾನೂರು ವಿಗ್ರಹಕ್ಕಿಂತ ದೊಡ್ಡದಾಗಿದೆ.

ಪ್ರಧಾನ ಆಲಯ ಮುಖ ಮಂಟಪ, ಅಂತರಾಳ, ಗರ್ಭಾಲಯಗಳಿಂದ ಕೂಡಿದೆ. ಚತುರಸ್ರಾಕಾರದ ಮುಖ ಮಂಟಪದಲ್ಲಿ ಮಧ್ಯದಲ್ಲಿ ಮೂಲ ಮೂರ್ತಿಗೆ ಎದುರಾಗಿ ಚತುರಸ್ರಾಕಾರದ ವೇದಿಕೆ ಏರ್ಪಾಡಾಗಿದೆ. ಈ ವೇದಿಕೆಯ ಮೇಲೆ ಉತ್ಸವ ಮೂರ್ತಿಗಳ ಒಡ್ಡೋಲಗ, ಕಲ್ಯಾಣೋತ್ಸವಗಳನ್ನು ಏರ್ಪಡಿಸುತ್ತಿದ್ದರು. ಈ ಮಂಟಪದಲ್ಲಿಯೇ ಉತ್ತರದ ಕಡೆಯ ಗೋಡೆಯ ಬಳಿಯ ವೇದಿಕೆಯಲ್ಲಿ ೯ ಆಳ್ವಾರರ ವಿಗ್ರಹಗಳು ಇವೆ. ಇಲ್ಲಿ ರಾಮಾನುಜಾಚಾರ್ಯರ ವಿಗ್ರಹವೂ ಇದೆ.

ಮುಖಮಂಟಪ ದಾಟಿದ ಕೂಡಲೇ ಚಿಕ್ಕ ಅಂತರಾಳವಿದೆ. ಅದರ ನಂತರ ಗರ್ಭಾಲಯ. ಗರ್ಭಾಲಯ ಅಂತರಾಳಕ್ಕಿಂತ ಅರ್ಧ ಅಡಿ ಎತ್ತರವಾಗಿದೆ. ಗರ್ಭಾಲಯದಲ್ಲಿ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿಯ ಆಳೆತ್ತರದ ವಿಗ್ರಹ ಪ್ರತಿಷ್ಠಾಪಿತವಾಗಿದೆ. ತಿರುಮಲೆಯಲ್ಲಿಯಂತೆಯೇ ಸ್ವಾಮಿ ಚತುರ್ಭುಜನಾಗಿ ಶಂಖ ಚಕ್ರಗಳನ್ನು ಧರಿಸಿ ಕಟಿ ಹಸ್ತ ಹೊಂದಿದ್ದಾನೆ. ತಿರುಮಲೆಯಲ್ಲಿ ಸ್ವಾಮಿ ವರದ ಹಸ್ತನಾಗಿದ್ದರೆ ಇಲ್ಲಿ ಅಭಯ ಮುದ್ರೆ ಹೊಂದಿದ್ದಾನೆ. ತಿರುಮಲೆಯ ಸ್ವಾಮಿ ಹೃದಯದಲ್ಲಿ ಲಕ್ಷ್ಮೀದೇವಿ ಇದ್ದರೆ ಅಪ್ಪಲಾಯಗುಂಟದಲ್ಲಿ ಲಕ್ಷ್ಮಿಯ ಸಂಕೇತವಾಗಿ ಸ್ವಾಮಿ ಹೃದಯದಲ್ಲಿ ತ್ರಿಭುಜಾಕಾರದ ಗುರುತು ಇದೆ.

ತಿರುಮಲೆಯಲ್ಲಿನಂತೆಯೇ ಇಲ್ಲೂ ವೈಖಾನಸಾಗಮ ರೀತ್ಯಾ ಪೂಜೆಗಳು ನಡೆಯುತ್ತವೆ. ಗರ್ಭಗುಡಿಯಲ್ಲಿ ಮೂಲ ಮೂರ್ತಿಗಳೇ ಅಲ್ಲದೆ ೩ ಅಡಿ ಎತ್ತರದ ಶ್ರೀದೇವಿ ಭೂದೇವಿ ಸಹಿತ ಪ್ರಸನ್ನ ವೆಂಕಟೇಶ್ವರಸ್ವಾಮಿ ವಿಗ್ರಹವಿದೆ. ಇವಲ್ಲದೆ, ಚಕ್ರತ್ತಾಳ್ವಾರ್, ವಿಶ್ವಕ್ಸೇನ, ಶ್ರೀ ಭಾಷ್ಯಕಾರರ ಉತ್ಸವ ವಿಗ್ರಹಗಳೂ ಇವೆ. ತಿರುಮಲೆ ತಿರುಪತಿಗಳಲ್ಲಿಯಂತೆಯೇ ಗರ್ಭಗುಡಿಯ ಮೇಲೆ ಏಕಕಲಶ 'ವಿಮಾನ ಗೋಪುರವಿದೆ'. ಮುಖಮಂಟಪ ಅಂತರಾಳ, ಗರ್ಭಗುಡಿ ಮೂರು ಒಂದೇ ಅಧಿಷ್ಠಾನದ ಮೇಲೆ ನಿರ್ಮಾಣವಾಗಿವೆ.

ಮೊದಲ ಪ್ರಾಕಾರದಲ್ಲಿ ಪ್ರವೇಶದ್ವಾರದ ಎಡಗಡೆ ಆಗ್ನೇಯ ಮೂಲೆಗೆ ಪಾಕಶಾಲೆ, ಯಾಗಶಾಲೆಗಳಿವೆ. ಪಾಕಶಾಲೆಯಲ್ಲಿ ಬಕುಳಮಾತೆಯ ವಿಗ್ರಹವಿದೆ.

ಹೊರ 'ಪ್ರಾಕಾರದ ಆಚೆ ಆಲಯದ ಎದುರಿಗೆ ಸುಮಾರು ನೂರುಗಜ ದೂರದಲ್ಲಿ ಶ್ರೀ ಪ್ರಸನ್ನ ಆಂಜನೇಯಸ್ವಾಮಿ ಆಲಯವಿದೆ. ಮುಖಮಂಟಪ ಗರ್ಭಗುಡಿಗಳಿಂದ ಕೂಡಿದ ಈ ಆಲಯದಲ್ಲಿ ತಿರುಪತಿ ತಿರುಮಲೆಗಳಲ್ಲಿಯಂತೆ ವೆಂಕಟರಮಣನ ಅಭಿಮುಖವಾದ ಆಳೆತ್ತರದ ಆಂಜನೇಯನ ಕೈ ಜೋಡಿಸಿ ನಿಂತಿರುವ ವಿಗ್ರಹವಿದೆ. ಈ ಪ್ರಸನ್ನ ಆಂಜನೇಯ ಸ್ವಾಮಿ ಇಷ್ಟಾರ್ಥಪ್ರದಾಯಕ ಎಂಬ ಪ್ರಸಿದ್ಧಿ ಪಡೆದಿದ್ದಾನೆ.

ಪ್ರತಿ ಭಾನುವಾರ ಈ ದೇವರಿಗೆ ಪಂಚಾಮೃತಾಭಿಷೇಕ, ಪೂಲಂಗಿ ಸೇವೆಗಳನ್ನು ಭಕ್ತರು ಹರಕೆಯಂತೆ ಸಲ್ಲಿಸುವುದುಂಟು.

ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಂಜನೇಯ ಸ್ವಾಮಿ ದೇವಾಲಯಗಳ ಮಧ್ಯದ ಖಾಲಿಸ್ಥಳದಲ್ಲಿ ದಕ್ಷಿಣಕ್ಕೆ ಒಂದೊಮ್ಮೆ ವಿಶಾಲವಾದ ವಾಹನ ಶಾಲೆಯಿದ್ದಂತೆ ತೋರಿಬರುತ್ತದೆ. ಅದು ಶಿಥಿಲವಾಗಲು ವಾಹನಗಳನ್ನು ಈಗಿನಂತೆ ಮುಖಮಂಟಪಕ್ಕೆ ಬದಲಾಯಿಸಿದರೆನ್ನುವಂತಿದೆ.

ಪ್ರಸನ್ನ ವೆಂಕಟೇಶ್ವರಸ್ವಾಮಿಗೆ ಪ್ರತಿ ಸಂವತ್ಸರದ ಜ್ಯೇಷ್ಠ ಮಾಸದಲ್ಲಿ ಹತ್ತು ದಿನಗಳ ಬ್ರಹ್ಮೋತ್ಸವ ನಡೆಯುತ್ತದೆ. ರಥೋತ್ಸವ, ಗರುಡೋತ್ಸವ ವಿಜೃಂಭಣೆಯಿಂದ ನಡೆಯುತ್ತಿದ್ದಿರಬೇಕು. ಈಗ ರಥವಿಲ್ಲವಾಗಿ ಆ ಊರಿನ ಜನ (೧೯೮೮) ಎತ್ತಿನ ಗಾಡಿಯಲ್ಲಿ ಮೆರವಣಿಗೆ ಮಾಡುತ್ತಾರೆ. ರಥೋತ್ಸವದ ಮಾರನೆಯದಿನ ದೇವಾಲಯದ ಎದುರಿನ ತಾವರೆಯ ಕೊಳದಲ್ಲಿ ಚಕ್ರಸ್ನಾನವಾಗುತ್ತದೆ. ಇದಲ್ಲದೆ ವೈಕುಂಠ ಏಕಾದಶಿಯಂದು ಮೆರವಣಿಗೆ. ಆ ಮಾರನೆಯ ದಿನ ಚಕ್ರಸ್ನಾನ ನಡೆಯುತ್ತಿದ್ದವು. ಉಗಾದಿಯ ಆಸ್ಥಾನ, ಪಂಚಾಂಗ ಶ್ರವಣ ನಡೆಯುತ್ತಿದ್ದವು.

ಒಂದು ಕಾಲಕ್ಕೆ ಈ ದೇವಾಲಯದಲ್ಲಿ ಭೋಗ ಶ್ರೀನಿವಾಸಮೂರ್ತಿ ಇದ್ದದ್ದರಿಂದಾಗಿ ಏಕಾಂತ ಸೇವೆ ನಡೆಯುತ್ತಿತ್ತು. ಆ ಮೂರ್ತಿ ಹೋದಮೇಲೆ ಏಕಾಂತಸೇವೆ ನಿಂತು ಹೋಯಿತೆಂದು ತಿಳಿದುಬರುತ್ತದೆ.

ಹೀಗೆ ಕಾರ್ವೇಟಿನಗರದ ಪ್ರಭುಗಳ ಕಾಲದಲ್ಲಿ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ನಿತ್ಯ ಕಲ್ಯಾಣ ಮೂರ್ತಿಯಾಗಿ ವೈಭವದಿಂದ ಮೆರೆದರೂ, ಕಾಲ ಕಳೆದಂತೆ ವೈಭವ ಕುಂಠಿತವಾಗಿದೆ. ಆದರೂ ಸ್ಥಾನಿಕರು ತಮ್ಮ ಭಕ್ತಿ, ಗೌರವ, ಶಕ್ತಿಗಳಿಗೆ ತಕ್ಕಂತೆ ನಿತ್ಯ ಪೂಜೆ ನೈವೇದ್ಯಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಪುನಃ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿಯ ಪೂರ್ವ ಸಂಭ್ರಮ ಪುನರುದ್ಧಾರವಾಗಬೇಕೆಂಬ ಆಕಾಂಕ್ಷೆಯಿಂದ ಸ್ಥಳೀಯರು ಸುತ್ತಮುತ್ತಲವರು ಈ ದೇವಾಲಯವನ್ನು ತಿ.ತಿ.ದೇ. ಆಡಳಿತಕ್ಕೆ ಒಪ್ಪಿಸಲು ಪ್ರಯತ್ನಿಸಿ ಸಫಲರಾಗಿದ್ದಾರೆ. ೨೩-೯-೮೮ ರಿಂದ ಅಪ್ಪಲಾಯಗುಂಟದ ಶ್ರೀ ಪ್ರಸನ್ನ ವೆಂಕಟೇಶ್ವರಾಲಯವನ್ನು ತಿ.ತಿ.ದೇ. ತನ್ನ ಆಡಳಿತದಲ್ಲಿ ತೆಗೆದುಕೊಂಡಿದೆ.

ತಿ.ತಿ.ದೇ. ಗಳ ಆಡಳಿತದಲ್ಲಿ ಆಲಯವೂ ಇತರ ತಿ. ತಿ. ದೇವಾಲಯಗಳಂತೆ ಭಕ್ತರಿಗೆ ಶಾಂತಿ ಸೌಹಾರ್ದಗಳ ತಾಣವಾಗಿ ಆರಾಧನಾ ನಿಲಯವಾಗಿ ಬೆಳೆಯುತ್ತಿದೆ.

ತೆಲುಗು ಮೂಲದ ಕನ್ನಡಾನುವಾದ-

**ಬಿ. ಎನ್. ಎಸ್.**

### ತಿರುಮಲೆ ತಿರುಪತಿ ದೇವಸ್ಥಾನಗಳು -- ತಿರುಪತಿ.



# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ



ತರುವೊಂದ ಬೆಳೆವವನು ದೇವರಾ ಸೇವಕನು
ಹರಿವನವ ತಲೆಮಾರುಗಳಿಗೆಲ್ಲ ಕರುಣೆಯನು
ಹರಸುವರು ಅವನ, ಜನ, ಅವನೆಂದು ನೋಡದವರು



ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿ ತನ್ನ ಭಕ್ತರಿಗೆಂದೇ ನೀಡಿದ ಪ್ರಶಸ್ತ ವರವಾಗಿದೆ. ದೇವರು ಸ್ವಯಂವ್ಯಕ್ತನಾದ ತಿರುಮಲೆಯ ಪವಿತ್ರ ಪರ್ವತದ ಅಮೂಲ್ಯವಾದ ಕಾಡುಗಳನ್ನು ಪರಿರಕ್ಷಿಸಿಕೊಳ್ಳುವ ತೀವ್ರ ಆಕಾಂಕ್ಷೆಯಿಂದ ತಿರುಮಲೆ ತಿರುಪತಿ ದೇವಸ್ಥಾನಗಳು 1981 ರಲ್ಲಿ ಜೀವ ಸೌಂದರ್ಯಯೋಜನೆಯಡಿಯಲ್ಲಿ ತಿರುಪತಿ, ತಿರುಮಲೆಗಳಲ್ಲಿ 29 ಲಕ್ಷ ಗಿಡಗಳನ್ನು ಬೆಳೆಸುವ ಮಹತ್ವಾಕಾಂಕ್ಷೆಯ ಅರಣ್ಯಾಭಿವೃದ್ಧಿ ಕ್ರಮವನ್ನು ಕೈಗೊಂಡು ಕ್ರಿಯಾಶೀಲವಾಯಿತು. ಈ ಯೋಜನೆಯ ಮೂಲ ಉದ್ದೇಶ -- ತಿರುಪತಿಯ ತಪ್ಪಲು ಪ್ರದೇಶದಲ್ಲೂ, ತಿರುಮಲೆಯ ಪರ್ವತಾವಳಿಯಲ್ಲೂ ಜೈವಿಕ ವಾತಾವರಣವನ್ನು ಪರಿರಕ್ಷಿಸಿ ಸಂವರ್ಧಿಸುವುದು.

ಈ ಯೋಜನೆಯ ಸಾಫಲ್ಯದಿಂದ ಉತ್ತೇಜಿತರಾಗಿ ಉತ್ಸಾಹಿತರಾಗಿ ತಿರುಮಲೆ ತಿರುಪತಿ ದೇವಸ್ಥಾನಗಳು ಮತ್ತೂ ಹಲವಾರು ಕಾರ್ಯಕ್ರಮಗಳನ್ನು ಅದೇ ದಿಕ್ಕಿನಲ್ಲಿ ಹಮ್ಮಿಕೊಂಡಿದೆ. ಇದರ ಹೆಸರು--

## ಶ್ರೀ ವೆಂಕಟೇಶ್ವರ ವನಾಭಿವೃದ್ಧಿಯೋಜನೆ

ತಿ. ತಿ. ದೇ. ಗಳ ಅರಣ್ಯ ವಿಭಾಗ ಹಮ್ಮಿಕೊಂಡಿರುವ ಈ ಅರಣ್ಯಾಭಿವೃದ್ಧಿ ಯೋಜನೆಯಲ್ಲಿ ಸಾರ್ವಜನಿಕರೂ ಭಾಗವಹಿಸಬಹುದಾದ ವಿಶೇಷ ಅವಕಾಶವನ್ನು ಕಲ್ಪಿಸಲಾಗಿದೆ. ಈ ಯೋಜನೆಯ ಹಲವಾರು ಪ್ರಮುಖ ವಿವರಗಳನ್ನು ಪಟ್ಟಿ ಮಾಡಲಾಗಿದೆ.

**ವೃಕ್ಷಸಂವರ್ಧನ ಯೋಜನೆ :** ರೂ.೨೫೦೦೦ - ದಾನವನ್ನು ನೀಡುವವರ ಹೆಸರಿನಲ್ಲಿ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ೫೦೦ ಸಸಿಗಳನ್ನು ತಿರುಪತಿ ತಿರುಮಲೆ ಗಳಲ್ಲಿ ನೆಟ್ಟು ಐದು ವರ್ಷ ಅವುಗಳನ್ನು ನೋಡಿಕೊಳ್ಳಲಾಗುವುದು.

**ವೃಕ್ಷಪ್ರಸಾದ :** ರೂ.೧೫೦೦೦ - ದಾನವನ್ನು ನೀಡುವವರ ಪರವಾಗಿ ತಿರುಪತಿ, ತಿರುಮಲೆಯಲ್ಲಿ ಪ್ರತಿವರ್ಷ ೧೦೦ ಫಲ, ಪುಷ್ಪ ತರುಗಳನ್ನು ಬೆಳೆಸಲಾಗುವುದು. ಹತ್ತುವರ್ಷಗಳ ಕಾಲ ದಾನಿಗಳ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ಪ್ರತಿವರ್ಷ ೧೦೦ ಹೂ ಹಣ್ಣುಗಳ ಸಸಿಗಳನ್ನು ವಿತರಿಸಲಾಗುವುದು

**ಸ್ಮಾರಕ ವನಗಳು:** ರೂ ೫೦೦೦ ದಾನ ನೀಡುವವರ ಹೆಸರಿನಲ್ಲಿ ತಿರುಪತಿ ತಿರುಮಲೆಗಳಲ್ಲಿ ಹತ್ತುಮರಗಳನ್ನು ಒಂದೆಡೆ ನೆಟ್ಟು ಐದುವರ್ಷ ನೋಡಿಕೊಳ್ಳಲಾಗುವುದು.

**ವನ ಸಂರಕ್ಷಣ ಭಾಗಸ್ವಾಮ್ಯ:** ರೂ ೨೦೦೦ ದಾನದಿಂದ ದಾನಿಗಳ ಹೆಸರನ್ನು ಹಿರಿದಾಗಿ ಪ್ರಕಟಿಸುವ ಫಲಕದೊಡನೆ ತಿರುಮಲೆಯ ವನಾಚ್ಛಾದನೆಯನ್ನು ಸಂರಕ್ಷಿಸುವ ಯೋಜನೆಯಿದು.

**ಮುಖ್ಯ ಸೂಚನೆ:- ೧. ಈ ಎಲ್ಲ ದಾನಗಳೂ, ೩೫ ಸಿ.ಸಿ.ಬಿ ಕಲಮಿನಂತೆ ನೂರು ಶತಾಂಶ ಆದಾಯಕರ ವಿಮುಕ್ತ ವಾಗಿರುತ್ತದೆ.**

**೨. ಈ ಪರಿಷ್ಕರಣಗಳು ೧-೨-೯೬ ರಿಂದ ಜಾರಿಗೆ ಬಂದಿವೆ. ಅದಕ್ಕೂ ಹಿಂದೆ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯಲ್ಲಿ ಸೇರಿದವರಿಗೆ ಹಳೆಯ ಸೌಲಭ್ಯಗಳು ಮುಂದುವರೆಯುತ್ತವೆ.**

ತಿರುಮಲೆಯ ಅರಣ್ಯನಮ್ಮ ಪರಂಪರೆಯ ಅವಿಭಾಜ್ಯ ಅಂಗ. ಅದನ್ನು ಸಂರಕ್ಷಿಸಿ ಸಂವರ್ಧನಗೊಳಿಸುವ.

ದಶಕೂಪ ಸಮೋವಾಪಿ ದಶ ವಾಪಿ ಸಮೋ ಹ್ರದ
ದಶಹ್ರದ ಸಮಃ ಪುತ್ರ ದಶ ಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ, ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ, ಹತ್ತು ಮಕ್ಕಳು ಒಂದು ತರುವಿಗೂ ಸಮ.

ಈ ಉದಾತ್ತ ಯೋಜನೆಯಲ್ಲಿ ಪಾಲುಗೊಂಡು ಉದಾರವಾಗಿ ದಾನನೀಡಿ ತಿರುಮಲೆಯನ್ನು -- ಶ್ರೀ ವೆಂಕಟೇಶ್ವರಸ್ವಾಮಿ ನಿವಾಸವನ್ನು -- ವನಸಿರಿಯಿಂದಲೂ ಸೌಂದರ್ಯಸಿರಿಯಿಂದಲೂ ಕೂಡಿರುವಂತೆ ಮಾಡುವಲ್ಲಿ ಸಹಕರಿಸಬೇಕೆಂದು ಕೋರಲಾಗಿದೆ.



ದಾನಗಳ ಡಿ.ಡಿ. ಯನ್ನು ತಾವು ಕಳುಹಿಸ ಬೇಕಾದ ವಿಳಾಸ:

ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇವಸ್ಥಾನಗಳು, ತಿರುಪತಿ.



ಕಾರ್ಯನಿರ್ವಹಣಾಧಿಕಾರಿ

# ಕ್ರೋಧಭಟ್ಟಾರಕ ದುರ್ವಾಸ

---ಕೆ. ಜಗನ್ನಾಥಶಾಸ್ತ್ರಿ.



ದುರ್ವಾಸರು ವೈದಿಕ ಯುಗದ ಮಹರ್ಷಿಗಳಲ್ಲಿ ಒಬ್ಬರು. ಇವರು ಮಹಾ ತೇಜಸ್ವಿಗಳು, ಉಗ್ರತಪಸ್ವಿಗಳು, ಉಗ್ರಸ್ವಭಾವದವರು, ಸಿದ್ಧಪುರುಷರೂ, ಭೋಜನ ಪ್ರಿಯರೂ ಆಗಿದ್ದರು.

ದುರ್ವಾಸರ ಹುಟ್ಟಿನ ಬಗ್ಗೆ ಎರಡು ಕಥೆಗಳಿವೆ. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬನಾದ ಅತ್ರಿಮುನಿಯು ಸಂತಾನಾರ್ಥವಾಗಿ ತಪಸ್ಸು ಮಾಡಲಾಗಿ, ಪ್ರಸನ್ನರಾದ ತ್ರಿಮೂರ್ತಿಗಳು ತಮ್ಮ ಒಬ್ಬೊಬ್ಬರ ಅಂಶದಿಂದಲೂ, ಒಬ್ಬೊಬ್ಬ ಮಗ ಹುಟ್ಟುವನೆಂದು ಅನುಗ್ರಹಿಸಿದರು. ಇದರಂತೆ ಬ್ರಹ್ಮನ ಅಂಶದಿಂದ ಚಂದ್ರನೂ, ವಿಷ್ಣುವಿನ ಅಂಶದಿಂದ ದತ್ತಾತ್ರೇಯನೂ, ಶಿವನ ಅಂಶದಿಂದ ದುರ್ವಾಸನೂ ಹುಟ್ಟಿದರು. ಮತ್ತೊಂದು ಕಥೆಯ ಪ್ರಕಾರ, ಬ್ರಹ್ಮವಿಷ್ಣುಮಹೇಶ್ವರರು, ಅತ್ರಿಪತ್ನಿಯಾದ ಅನಸೂಯೆಯ ಪಾತಿವ್ರತ್ಯವನ್ನು ಪರೀಕ್ಷಿಸಲು ಬಂದು, ಶಿಶುರೂಪವನ್ನು ಪಡೆದರು. ಅನಸೂಯೆ ಇವರನ್ನು ಸಾಕಿ ಸಲಹಿದಳು. ಇವರೇ ಮುಂದೆ ಬ್ರಹ್ಮನು ಚಂದ್ರನಾಗಿ, ವಿಷ್ಣುವು ದತ್ತಾತ್ರೇಯನಾಗಿ, ಶಿವನು ದುರ್ವಾಸನಾಗಿ ಪ್ರಸಿದ್ಧಿಗೆ ಬಂದರು. ಹೀಗೆ ಒಂದೊಂದು ಮನ್ವಂತರದಲ್ಲಿಯೂ, ಶೈವಾಂಶದಿಂದ ಹುಟ್ಟಿಬಂದ, ಮಹಾನ್ ಋಷಿ, ದುರ್ವಾಸರು.

ಇವರು ಶೀಘ್ರಕೋಪಕ್ಕೆ ಹೆಸರಾದವರು. ಒಮ್ಮೆ ಸಂಚಾರಾರ್ಥವಾಗಿ ದೇವಲೋಕಕ್ಕೆ ಹೋದರು. ಅಲ್ಲಿ ಒಬ್ಬ ವಿದ್ಯಾಧರಿಯ ಕೈಯಲ್ಲಿದ್ದ ಕಲ್ಪವೃಕ್ಷದ ಹೂಮಾಲೆಯನ್ನು ಪರಿಮಳಕ್ಕೆ ಆಕರ್ಷಿತರಾಗಿ, ವಿದ್ಯಾಧರಿಯನ್ನು ಬೇಡಿ, ಅದನ್ನು ಪಡೆದು, ಆ ಮಾಲೆಯೊಂದಿಗೆ ಬರುತ್ತಿದ್ದರು. ಆ ಮಾರ್ಗದಲ್ಲಿ ಐರಾವತದ ಮೇಲೆ ಶಚೀದೇವಿಯೊಂದಿಗೆ ಕುಳಿತು ಇಂದ್ರನು ಬರುತ್ತಿದ್ದನು. ಇಂದ್ರನು ದೇವತೆಗಳ ಒಡೆಯ - ಎಂಬ ಗೌರವದ ಭಾವನೆಯಿಂದ, ದುರ್ವಾಸರು, ಆ ಮಾಲೆಯನ್ನು, ಅವನಿಗೆ ಕೊಟ್ಟರು. ಇಂದ್ರನು ಅದನ್ನು ತಿರಸ್ಕಾರವಾಗಿ ಕಂಡು, ಐರಾವತದ ಕುಂಭಸ್ಥಳದ ಮೇಲೆ ಎಸೆದನು. ಐರಾವತ ಅದನ್ನು ಕೆಳಕ್ಕೆ ಬೀಳಿಸಿ, ಕಾಲಿನಿಂದ ಹೊಸೆದು ಹಾಕಿತು. ಇದರಿಂದ ಕೋಪಗೊಂಡ ದುರ್ವಾಸರು "ನಿನ್ನ ಸಂಪತ್ತು ನಾಶವಾಗಲಿ" ಎಂದು ಇಂದ್ರನಿಗೆ ಶಾಪವಿತ್ತರು.

ಇವರು ಒಮ್ಮೆ ಕಾಶೀಕ್ಷೇತ್ರದಲ್ಲಿ ಶಿವನನ್ನು ಕುರಿತು ತಪಸ್ಸು ಮಾಡುತ್ತಿದ್ದರು. ಎಷ್ಟುವರ್ಷಗಳು ಕಳೆದರೂ ಶಿವ ಪ್ರತ್ಯಕ್ಷನಾಗಲಿಲ್ಲ. ಕೋಪಗೊಂಡ ದುರ್ವಾಸರು "ಕಾಶಿಯಲ್ಲಿ ಯಾರಿಗೂ ಮುಕ್ತಿ ಸಿಗದಿರಲಿ" ಎಂದು ಶಾಪಕೊಡಲು ಸಿದ್ಧರಾದರು. ಇದನ್ನರಿತ ಶಿವ ಪ್ರತ್ಯಕ್ಷನಾಗಿ, ಅವರ ಅಭೀಷ್ಟವನ್ನು ನೆರವೇರಿಸಿದನು. ಅನಂತರ ದುರ್ವಾಸರು ಅಲ್ಲಿ ಅನೇಕ ವರ್ಷಗಳವರೆಗೆ ತಪಸ್ಸು ಮಾಡಿ, ಸಿದ್ಧಪುರುಷರಾದರು.

ದುರ್ವಾಸರು ಭೋಜನ ಪ್ರಿಯರು. ಹಾಗೆಯೇ ಶಿಷ್ಯ ಪ್ರಿಯರೂ ಹೌದು. ಇವರು ಸಂಚಾರ ಹೊರಟಾಗ, ನೂರಾರು ಜನ ಶಿಷ್ಯರ ಗುಂಪೇ ಇವರೊಂದಿಗಿರುತ್ತಿತ್ತು. ಆತಿಥೇಯರು, ಶಿಷ್ಯಸಮೂಹ ಸಹಿತವಾಗಿಯೇ, ದುರ್ವಾಸರಿಗೆ ಆತಿಥ್ಯ ನೀಡಬೇಕಾಗಿತ್ತು. ಆತಿಥ್ಯದಲ್ಲಿ ಏನಾದರೂ ಸ್ವಲ್ಪ ವ್ಯತ್ಯಾಸವಾದರೂ, ಸಾಕು, ಇವರಿಗೆ ಮಹಾಕೋಪ ಬರುತ್ತಿತ್ತು. ಆಗ ಹಿಂದುಮುಂದು ನೋಡದೆ, ಶಾಪ ಕೊಟ್ಟುಬಿಡುತ್ತಿದ್ದರು. ಹೀಗೆ ಇವರು ಕೊಟ್ಟ ಶಾಪಗಳೆಲ್ಲವೂ, ಶಾಪಗ್ರಸ್ತರಿಗೆ ವರಗಳಾಗಿಯೇ ಪರಿಣಮಿಸುತ್ತಿದ್ದವು. ಇದು ಇವರ ಶಾಪ ವೈಶಿಷ್ಟ್ಯವಾಗಿತ್ತು.

ಒಮ್ಮೆ ಭಗವದ್ಭಕ್ತನಾದ ಅಂಬರೀಶನು ಒಂದು ವರ್ಷಕಾಲ ದ್ವಾದಶೀ ಪ್ರಧಾನವಾದ ಏಕಾದಶೀ ವ್ರತವನ್ನು ಕೈಗೊಂಡನು. ವ್ರತಪೂರ್ಣಗೊಂಡನಂತರ ಪಾರಣೆಗಾಗಿ ಎಲ್ಲವೂ ಸಿದ್ಧವಾಗಿದ್ದವು. ಆಗ ಅಲ್ಲಿಗೆ ದುರ್ವಾಸರು ಬಂದರು. ಅಂಬರೀಶನು ಅವರನ್ನು ಗೌರವದಿಂದ ಸ್ವಾಗತಿಸಿ, ಭೋಜನಕ್ಕೆ ಆಮಂತ್ರಿಸಿದನು. ಆಹ್ವಾನವನ್ನು ಸ್ವೀಕರಿಸಿದ ದುರ್ವಾಸರು, ಶಿಷ್ಯರೊಂದಿಗೆ ಸ್ನಾನಕ್ಕೆಂದು ನದಿಗೆ ಹೋದರು. ಸ್ನಾನಾನಂತರ ಧ್ಯಾನದಲ್ಲಿ ಮಗ್ನರಾದ ದುರ್ವಾಸರಿಗೆ, ಭೋಜನದ ವೇಳೆಯಾದುದು ತಿಳಿಯಲೇ

తిరుమలె - తిరుపతి దేవస్థానగళు

## ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ--

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.
2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.
3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.
4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.
5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.
6. ಆಲಯಸಮುದಾಯ --ಹೃಷೀಕೇಶ.

ಯಾತ್ರಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಂಡು ದೇವರ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಕೋರಲಾಗಿದೆ.

ತಿ. ತಿ. ದೇವಸ್ಥಾನಗಳು,
--ತಿರುಪತಿ.

ಇಲ್ಲ. ಇತ್ತ ಪಾರಣೆಗೆ ಮುಹೂರ್ತ ಮೀರುತ್ತಿತ್ತು. ಅಂಬರೀಶನು ಅಲ್ಲಿದ್ದ ಋಷಿಮುನಿಗಳನ್ನೂ ಜ್ಞಾನಿಗಳನ್ನೂ ಈ ವಿಷಯದಲ್ಲಿ ಪ್ರಶ್ನಿಸಿದನು. ಆಗ ಅವರು - "ಪಾರಣೆ ಮುಹೂರ್ತದಲ್ಲಿ ಆಹಾರ ಸ್ವೀಕರಿಸದಿದ್ದರೆ ದೋಷವೆಂದು ಹೇಳುತ್ತಾರೆ. ಆದ್ದರಿಂದ ನೀನು ನೀರನ್ನು ತೆಗೆದುಕೊಳ್ಳಬಹುದು. ನೀರು ಕ್ಷುದ್‌ಬಾಧೆಯನ್ನು ನೀಗುವುದರಿಂದ ಪಾರಣೆಯಾದಂತೆಯೂ ಆಗುತ್ತದೆ. ಜಲಪಾನವು ಊಟವಲ್ಲವಾದ್ದರಿಂದ, ಅತಿಥಿಯನ್ನು ಬಿಟ್ಟು ಊಟ ಮಾಡಿದ ದೋಷವೂ ಬರುವುದಿಲ್ಲ" ಎಂದರು. ಅಂಬರೀಶನು ಹಾಗೆಯೇ ಮಾಡಿದನು.

ಸ್ವಲ್ಪ ಕಾಲಾನಂತರ ದುರ್ವಾಸರು ಬಂದರು. ಅಂಬರೀಶನು ಜಲಪಾನದ ಮೂಲಕ ಪಾರಣೆ ಮಾಡಿದ ವಿಷಯವನ್ನು, ಅವರು ತಿಳಿದರು. ತಕ್ಷಣವೇ ಕೋಪಗೊಂಡ ಅವರು "ಕೃತ್ಯೆ" ಎಂಬ ಶಕ್ತಿಯನ್ನು ಸೃಷ್ಟಿಮಾಡಿ, ಅಂಬರೀಶನನ್ನು ನುಂಗಿಬಿಡುವಂತೆ ಆಜ್ಞಾಪಿಸಿದರು. ಕೃತ್ಯೆ ಅಂಬರೀಶನನ್ನು ನುಂಗಲು ಬಂದಿತು. ಆಗ ಸದಾ ಅಂಬರೀಶನನ್ನು ರಕ್ಷಿಸುತ್ತಿದ್ದ, ಸುದರ್ಶನ ಚಕ್ರವು, ಕೃತ್ಯೆಯನ್ನು ನುಂಗಿತು. ಅನಂತರ, ದುರ್ವಾಸರನ್ನು ನುಂಗಲು ಮುನ್ನುಗ್ಗಿತು. ಆಗ ದುರ್ವಾಸರು ಬ್ರಹ್ಮಲೋಕ ಶಿವಲೋಕಗಳಿಗೆ ಓಡಿದರು. ಅಲ್ಲಿ ಯಾರೂ ಇವರನ್ನು ರಕ್ಷಿಸಲಿಲ್ಲ. ಸುದರ್ಶನ ಚಕ್ರ ಇವರನ್ನು ಬೆನ್ನಟ್ಟಿ ಬರುತ್ತಲೇ ಇತ್ತು. ದುರ್ವಾಸರು ವಿಷ್ಣುವಿನ ಬಳಿಗೆ ಬಂದರು. ಆಗ ವಿಷ್ಣುವು ತನ್ನಿಂದಲೂ ರಕ್ಷಣೆ ನೀಡಲು ಸಾಧ್ಯವಿಲ್ಲವೆಂದೂ, ಭಕ್ತನಾದ ಅಬರೀಶನೇ ಶಕ್ತನೆಂದೂ ಹೇಳಿದನು. ನಿರುಪಾಯರಾಗಿ, ದುರ್ವಾಸರು, ಅಂಬರೀಶನ ಶರಣು ಹೊಕ್ಕರು. ಅಂಬರೀಶನು, ಸುದರ್ಶನ ಚಕ್ರವನ್ನು ಶಾಂತವಾಗುವಂತೆ ಪ್ರಾರ್ಥಿಸಿದನು. ಅದು ಶಾಂತವಾಯಿತು. ಅನಂತರ ದುರ್ವಾಸರು, ಶಿಷ್ಯ ಸಹಿತ ಭೋಜನ ಮಾಡಿದರು. ಆ ಮೇಲೆ ಅಂಬರೀಶನು ಪಾರಣೆ ಮಾಡಿದನು. ಭೋಜನದ ನಂತರ ಪ್ರಸನ್ನರಾದ, ದುರ್ವಾಸರು, ಅಂಬರೀಶನನ್ನು ಆಶೀರ್ವದಿಸಿ, ಹೊರಟರು. ಅಲ್ಲಿಯೇ ಬಾಗಿಲಿನಲ್ಲಿದ್ದ ಸುದರ್ಶನ ಚಕ್ರವನ್ನು ದುರ್ವಾಸರು ನೋಡಿದರು. ತಕ್ಷಣವೇ ಕೋಪಬಂದು - "ಸೂರ್ಯನೆದುರು ನಿಂತಾಗ ನಿನಗೆ ಕಾಂತಿ ಹೀನತ್ವ ಬರಲಿ" ಎಂದು ಶಪಿಸಿದರು. ಭಯಗೊಂಡ ಸುದರ್ಶನ, ವಿಷ್ಣುವಿನ ಬಳಿಗೆ ಬಂದು, ಶಾಪದ ವಿಷಯವನ್ನು ತಿಳಿಸಿತು. ಆಗ ವಿಷ್ಣು - "ದುರ್ವಾಸರ ಶಾಪ ವರವಾಗುವ ಕಾಲ ಬರುತ್ತದೆ. ಅದಕ್ಕಾಗಿ ಚಿಂತಿಸಬೇಡ, ದ್ವಾಪರ ಯುಗದಲ್ಲಿ, ಜಯದ್ರಥನೆಂಬುವವನನ್ನು ಕೊಲ್ಲುವ ಸಂದರ್ಭ ಬರುತ್ತದೆ. ಆಗ ಈ ಶಾಪ ವರವಾಗಿ ಪರಿಣಮಿಸಿ, ಶಾಪ ವಿಮೋಚನೆಯೂ ಆಗುತ್ತ ಎಂದನು. ಸುದರ್ಶನಕ್ಕೆ ಸಮಾಧಾನವಾಯಿತು.

ಒಂದು ಸಲ, ದುರ್ವಾಸರು ಶಿಷ್ಯರೊಡನೆ, ದ್ವಾ ಕೆಗೆ ಬಂದು, ಶ್ರೀಕೃಷ್ಣನನ್ನು ಕಂಡರು. ಶ್ರೀಕ ರುಕ್ಮಿಣೀ ಸಮೇತನಾಗಿ ಬಂದು, ಋಷಿಗಳನ್ನು ಸ ರಿಸಿ, ಸ್ತುತಿಸಿದನು. ಕುಶಲಪ್ರಶ್ನೆಗಳಾದ ಮೇ ಅವರನ್ನು ಭೋಜನಕ್ಕೆ ಆಹ್ವಾನಿಸಿದನು. ದುವಾ ಸರು; ಶಿಷ್ಯರೊಂದಿಗೆ ಊಟಕ್ಕೆ ಕುಳಿತರು. ಬಡಿ ವಾಗ ಏನೋ ವ್ಯತ್ಯಾಸವಾಗಿ, ದುರ್ವಾಸರಿಗೆ ಕೋ ಬಂದು, ತಮ್ಮ ಎಲೆಯ ಮೇಲೆ ಇದ್ದ ಪಾಯ ವನ್ನು ಕೃಷ್ಣನ ಮೇಲೂ ರುಕ್ಮಿಣಿಯ ಮೇಲೂ ಚೆ ದರು. ದುರ್ವಾಸರ ಸ್ವಭಾವ ಕೃಷ್ಣನಿಗೆ ಗೊತ್ತಿ ಹಾಗಾಗಿ ಅವನು ಕೋಪಗೊಳ್ಳಲಿಲ್ಲ. ಕೃಷ್ಣನ ಸಂ ತವನ್ನು ಅರಿತ ರುಕ್ಮಿಣಿಯೂ ಬೇಸರಗೊಳ್ಳಲಿ ಕೃಷ್ಣ, ಆ ಎಂಜಲು ಪಾಯಸವನ್ನು ಮಹಾ ಪ್ರ ದವೆಂದು ಭಾವಿಸಿ, ತನ್ನ ಮೈಗೆಲ್ಲಾ ಬಳಿದುಕೊ ಡನು. ಭೋಜನ ಮುಗಿಯಿತು. ದುರ್ವಾಸರ ಶ್ರೀಕೃಷ್ಣನಿಂದ ಬೀಳ್ಕೊಡುವಾಗ, ಅವನ ಅಂಗಾ ಗವನ್ನೆಲ್ಲಾ ದೃಷ್ಟಿಬೀರಿ ನೋಡಿ - "ನೀನು ಪಾ ಸವನ್ನು ಮೈಗೆಲ್ಲಾ ಬಳಿದುಕೊಂಡರೂ ಅಂಗಾಲಿ ಬಳಿದುಕೊಂಡಿಲ್ಲ. ಆದ್ದರಿಂದ ಅಂಗಾಲಿನ ಮೂ ಕವೇ ನಿನಗೆ ಮರಣವುಂಟಾಗಲಿ" ಎಂದು ಶಾ ಕೊಟ್ಟರು. ಕೃಷ್ಣನು ನಗುತ್ತಲೇ ಶಾಪವನ್ನು ಸ್ವೀಕ ಸಿದನು. ಕೊನೆಗೆ ಇದು ಶ್ರೀಕೃಷ್ಣನಿಗೆ ವರವೇ ಆ ಬೇಟೆಗಾರನೊಬ್ಬನ ಬಾಣ, ಅಂಗಾಲಿಗೆ ತಗು ಅವನು ಪ್ರಾಣಬಿಟ್ಟನು.

ವನವಾಸ ಕಾಲದಲ್ಲಿ, ಪಾಂಡವರು ಸುಖವ ಗಿದ್ದಾರೆ - ಎಂಬುದನ್ನು ತಿಳಿದ ದುರ್ಯೋ ಧನ, ಏನಾದರೂ ಮಾಡಿ, ಅವರು ಅತ್ಯಂತ ಸಂ ಟಕ್ಕೆ ಒಳಗಾಗುವಂತೆ ಮಾಡಬೇಕು - ಎಂದ ಹಂಬಲಿಸುತ್ತಿದ್ದನು. ಹೀಗಿರುವಾಗ, ಒಂದ ದಿನ ದುರ್ವಾಸರು ಶಿಷ್ಯ ಸಮೇತರಾಗಿ, ಹಸ್ತಿನ ವತಿಗೆ ಬಂದು, ದುರ್ಯೋಧನನನ್ನು ಕಂಡರು ದುರ್ವಾಸರು ಭೋಜನಪ್ರಿಯರು ಎಂಬುದೂ ಶೀಘ್ರಕೋಪಿಗಳು, ಶಪಿಸುವುದರಲ್ಲಿ ನಿಸ್ಸೀಮರ ಎಂಬುದೂ, ಇವರ ಶಾಪವನ್ನು ವಿಶಾಪಗೊಳಿಸ ವುದು ಹರಿಹರ ಬ್ರಹ್ಮಾದಿಗಳಿಂದಲೂ ಸಾಧ್ಯವಿಲ್ಲ ಎಂಬುದೂ ದುರ್ಯೋಧನನಿಗೆ ಗೊತ್ತಿತ್ತು. ಅ ಥಿಗಳಾಗಿ ಬಂದ ದುರ್ವಾಸರನ್ನೂ ಊಟದನ ತರ ದುರ್ಯೋಧನನನ್ನು ಕುರಿತು ದುರ್ವಾಸರ - "ನಿನ್ನ ಆತಿಥ್ಯದಿಂದ ನಮಗೆಲ್ಲಾ ತೃಪ್ತಿಯ ಗಿದೆ. ವರವನ್ನು ಬೇಡು" ಎಂದರು. ಇದನ್ನೆ ಕಾಯುತ್ತಿದ್ದ ದುರ್ಯೋಧನ "ತಾವು ತಮ್ಮ ಶಿಷ ರೊಂದಿಗೆ ಕಾಮ್ಯಕ ವನಕ್ಕೆ ಹೋಗಿ, ಪಾಂಡವ

ಲ್ಲರ ಭೋಜನವಾದ ಮೇಲೆ, ಆತಿಥ್ಯವನ್ನು ಬೇಡಬೇಕು" ಎಂದನು. ಮಾನಸಿಕವಾಗಿ ಕಸಿವಿಸಿಯಾದರೂ ದುರ್ವಾಸರು, ಅದನ್ನು ತೋರ್ಪಡಿಸದೆ - "ಪಾಪಿಯ ಅನ್ನವನ್ನು ಉಂಡದಕ್ಕೆ ಸರಿಯಾದ ಪ್ರಾಯಶ್ಚಿತ್ತವನ್ನು ಅನುಭವಿಸಲೇ ಬೇಕು" ಎಂದುಕೊಂಡು, ದುರ್ಯೋಧನನಿಗೆ "ಆಗಲಿ" ಎಂದು ಹೇಳಿ, ಅಲ್ಲಿಂದ ಬೀಳ್ಕೊಂಡರು. ಕೆಲವು ದಿನಗಳ ಪ್ರಯಾಣದನಂತರ, ಅವರು ಕಾಮ್ಯಕವನಕ್ಕೆ ಬಂದು, ಎಲ್ಲರ ಊಟವಾದ ಸಮಯವನ್ನರಿತು, ಧರ್ಮರಾಯನನ್ನು ಭೇಟಿಮಾಡಿ, ಆತಿಥ್ಯವನ್ನು ಬೇಡಿದರು. ಧರ್ಮರಾಯನು "ಆಗಲಿ" ಎಂದನು. ಸ್ನಾನ ಸಂಧ್ಯಾದಿಗಳನ್ನು ಪೂರೈಸುವ ಸಲುವಾಗಿ, ದುರ್ವಾಸರು ಶಿಷ್ಯ ಸಮೇತ, ನದಿಗೆ ಹೋದರು. ಧರ್ಮರಾಯನ ಆಶ್ರಮದಲ್ಲಿ ಅಕ್ಷಯ ಪಾತ್ರೆ ಇತ್ತಾದರೂ, ಸೂರ್ಯಾಸ್ತದನಂತರ ಬೇಡಿದ ಆಹಾರವನ್ನು ಕೊಡುವ ಶಕ್ತಿ ಅದಕ್ಕಿರಲಿಲ್ಲ. ಆದ್ದರಿಂದಲೇ ದುರ್ವಾಸರು ಸೂರ್ಯಾಸ್ತದ ಸಮಯದಲ್ಲಿ ಬಂದು, ಆತಿಥ್ಯವನ್ನು ಕೇಳಿದ್ದರು. ದ್ರೌಪದಿ, ಶ್ರೀಕೃಷ್ಣನನ್ನು ಪ್ರಾರ್ಥಿಸಿದಳು. ಶ್ರೀಕೃಷ್ಣ ಬಂದು, ತೃಪ್ತನಾದಾಗ, ದುರ್ವಾಸರ ಮತ್ತು ಅವರ ಶಿಷ್ಯರ ಹಸಿವು ನೀಗಿತು. ಈ ಸಮಯದಲ್ಲಿ ಶ್ರೀಕೃಷ್ಣನ ದರ್ಶನದಿಂದ ಸಂತೋಷಗೊಂಡ ದುರ್ವಾಸರು, ತನ್ನ ತಪಸ್ಸಿನ ಫಲವನ್ನು ಧರ್ಮರಾಯನಿಗೆ ಧಾರೆಯೆರೆದರಲ್ಲದೆ, ದುರ್ಯೋಧನನಿಗೆ "ಸಹೋದರರು ಮತ್ತು ಮಿತ್ರರ ಸಹಿತ ನಾಶವಾಗು" ಎಂದು ಶಾಪ ಕೊಟ್ಟರು.

ದುರ್ವಾಸರ ಭೋಜನಪ್ರಿಯತೆ, ಲಕ್ಷ್ಮಣನ ಸ್ವರ್ಗಾರೋಹಣಕ್ಕೆ ಕಾರಣವಾಯಿತು. ರಾಮಾವತಾರದ ಕೊನೆಯ ಘಟ್ಟ, ಕಾಲಪುರುಷ ಶ್ರೀರಾಮನೊಂದಿಗೆ ಸಂಭಾಷಣೆ ಮಾಡಲು ಬಂದಿದ್ದಾನೆ. ರಾಮ - ಕಾಲಪುರುಷರ ಸಂಭಾಷಣೆಯ ಕಾಲದಲ್ಲಿ, ಅಲ್ಲಿಗೆ, ಯಾರೂ ಪ್ರವೇಶಿಸುವಂತಿರಲಿಲ್ಲ. ರಹಸ್ಯಮಂದಿರದ ಬಾಗಿಲಿನಲ್ಲಿ ಲಕ್ಷ್ಮಣ ಕಾವಲಿದ್ದು, ಯಾರೂ ಒಳಗೆ ಹೋಗದಂತೆ ಕಾಯುತ್ತಿದ್ದನು. ಒಂದು ವೇಳೆ ಯಾರಾದರೂ ಹೋದರೆ, ಶ್ರೀರಾಮ ಲಕ್ಷ್ಮಣನ ತಲೆಯನ್ನು ಕತ್ತರಿಸಬೇಕಾಗಿತ್ತು. ಶ್ರೀರಾಮ ಮತ್ತು ಕಾಲಪುರುಷರ ಸಂಭಾಷಣೆ ನಡೆಯುತ್ತಿದ್ದಾಗ, ದುರ್ವಾಸರು, ಶ್ರೀರಾಮನನ್ನು ಕಾಣಲು, ಅಯೋಧ್ಯೆಗೆ ಬಂದರು. ಅವರು ಅನೇಕ ವರ್ಷಗಳವರೆಗೆ ವ್ರತ ನಿಯಮದಲ್ಲಿದ್ದು, ಆದಿನ ವ್ರತೋದ್ಯಾಪನೆಯನ್ನು ಮಾಡಿ, ಪಾರಣೆಗಾಗಿ, ಸ್ರೀರಾಮನ ಆತಿಥ್ಯವನ್ನು ಕೇಳಲು ಬಂದಿದ್ದರು. ಲಕ್ಷ್ಮಣ ಶ್ರೀರಾಮನ ಅಪ್ಪಣೆಯನ್ನು ತಿಳಿಸಿದ. ಕೋಪಗೊಂಡ ದುರ್ವಾಸರು, ಲಕ್ಷ್ಮಣನ ಸಹಿತವಾಗಿ, ರಾಮಾದಿಗಳನ್ನೂ, ಇಡೀ ನಗರವನ್ನೂ, ಅವರ ವಂಶವನ್ನೂ ನಾಶ ಮಾಡುವುದಾಗಿ ಆರ್ಭಟಿಸಿದರು. ಅವರ ಶಕ್ತಿ ಲಕ್ಷ್ಮಣನಿಗೆ ತಿಳಿದಿತ್ತು. ತಾನೊಬ್ಬನು ಸತ್ತರೂ ಚಿಂತೆಯಿಲ್ಲ, ಉಳಿದವರು ಉಳಿಯುತ್ತಾರಲ್ಲ ಎಂದು ನಿರ್ಧರಿಸಿ, ರಹಸ್ಯ ಗೃಹಕ್ಕೆ ಹೋಗಿ, ಶ್ರೀರಾಮನಿಗೆ, ದುರ್ವಾಸರು ಬಂದಿರುವ ವಿಷಯ ತಿಳಿಸಿದನು. ಹೊರಬಂದ ಶ್ರೀರಾಮ, ದುರ್ವಾಸರಿಗೆ ಭೂರಿ ಭೋಜನ ಮಾಡಿಸಿ, ಕಳಿಸಿಕೊಟ್ಟನು. ಅನಂತರ ನಿಯಮದ ಪ್ರಕಾರ ಲಕ್ಷ್ಮಣನನ್ನು ಕೊಲ್ಲಲು ಸಿದ್ಧನಾದನು. ಆದರೆ ವಶಿಷ್ಠರು - "ಸಜ್ಜನರಿಗೆ ಪರಿತ್ಯಾಗವೇ ವಧೆಗೆ ಸಮಾನ" ಎಂದು ಹೇಳಿದ್ದರಿಂದ, ಶ್ರೀರಾಮನು ಲಕ್ಷ್ಮಣನನ್ನು ಪರಿತ್ಯಾಗ ಮಾಡಿದನು. ಇದನ್ನರಿತ ದೇವೇಂದ್ರನು, ಯಾರಿಗೂ ಗೋಚರಿಸದಂತೆ, ಭೂಲೋಕಕ್ಕೆ ಬಂದು ಲಕ್ಷ್ಮಣನನ್ನು ಎತ್ತಿಕೊಂಡು ಸ್ವರ್ಗಕ್ಕೆ ಹೊರಟುಹೋದನು.

ದುರ್ವಾಸರು ಸಿದ್ಧ ಪುರುಷರೂ ಹೌದು. ಭಾರತದ ಉದ್ದಗಲದಲ್ಲಿ ಅನೇಕ ಸಿದ್ಧಕ್ಷೇತ್ರಗಳು ದುರ್ವಾಸರ ತಪಸ್ಸಿದ್ಧಿಗೆ ಪ್ರಸಿದ್ಧವಾಗಿವೆ. ಇವರು, ತಮ್ಮ ಉಪಾಸನಾ ಶಕ್ತಿಯಿಂದ ಅನೇಕ ಮಂತ್ರಶಕ್ತಿಗಳನ್ನು ತಮ್ಮ ವಶಮಾಡಿಕೊಂಡಿದ್ದರು. ಒಂದು ಸಲ ಇವರು ಕುಂತೀಭೋಜನ ಅರಮನೆಗೆ ಬಂದರು. ಕೆಲವು ದಿನ ಕುಂತೀಭೋಜನ ಅರಮನೆಯಲ್ಲಿ ಇರಬೇಕೆಂಬ ತನ್ನ ಬಯಕೆಯನ್ನು ದುರ್ವಾಸರು, ಅವನಿಗೆ ತಿಳಿಸಿದರು. ಸಂತೋಷಗೊಂಡ, ಕುಂತೀಭೋಜನು, ಸಕಲ ಏರ್ಪಾಡುಗಳನ್ನೂ ಮಾಡಿ, ಪರಿಚರ್ಯೆಗೆ ಕುಂತಿಯನ್ನು ನೇಮಿಸಿದನು. ತಮ್ಮ ವ್ರತ ಪೂರ್ಣಗೊಂಡನಂತರ, ದುರ್ವಾಸರು, ಪರಿಚರ್ಯೆಯಿಂದ ತೃಪ್ತಿಪಡಿಸಿದ್ದಕ್ಕಾಗಿ, ಕುಂತಿಗೆ, ಯಾವ ದೇವತೆಯನ್ನು ಬೇಕಾದರೂ ವಶಪಡಿಸಿಕೊಳ್ಳಬಹುದಾದ ಮಹಿಮೆಯುಳ್ಳ ಮಂತ್ರಗಳನ್ನು, ಉಪದೇಶಿಸಿದರು. ಈ ಮಂತ್ರದ ಪ್ರಭಾವದಿಂದ, ಕುಂತಿಯು ಕರ್ಣ, ಯುಧಿಷ್ಠಿರ, ಭೀಮ, ಅರ್ಜುನರನ್ನೂ, ಮಾದ್ರಿಗೆ, ಕುಂತಿಯು ಈ ಮಂತ್ರಗಳನ್ನು ಉಪದೇಶಕೊಟ್ಟದ್ದರಿಂದ, ಅವಳು ನಕುಲ ಸಹದೇವರನ್ನೂ ಪಡೆದರು.

ದುರ್ವಾಸರ ಶಾಪದ ಪರಿಣಾಮವಾಗಿ, ಸರಸ್ವತಿಯು ಭೂಲೋಕದಲ್ಲಿ ನೆಲೆಸುವಂತಾಯಿತು. ಒಮ್ಮೆ ದೇವಲೊಕದಲ್ಲಿ, ಇಂದ್ರನ ಆಸ್ಥಾನದಲ್ಲಿ ಮಹಾಸಭೆ ಸೇರಿತ್ತು. ಅಲ್ಲಿಗೆ ಬ್ರಹ್ಮಸರಸ್ವತಿಯರೂ, ಲಕ್ಷ್ಮೀನಾರಾಯಣರೂ, ಶಿವಪಾರ್ವತಿಯರೂ, ಎಲ್ಲ ದೇವತೆಗಳೂ, ದುರ್ವಾಸರೇ ಆದಿಯಾದ ಮಹರ್ಷಿಗಳೂ ಗಂಧರ್ವಕಿಂಪುರುಷರೂ ಸೇರಿದ್ದರು. ಇಂದ್ರನು ಬಂದು ಸಿಂಹಾಸನದ ಮೇಲೆ ಕುಳಿತನು. ಮಹರ್ಷಿಗಳು ಒಬ್ಬೊಬ್ಬರಾಗಿ ವೈದಿಕ ಋಕ್ಕುಗಳಿಂದ ಇಂದ್ರನನ್ನು ಸ್ತುತಿಸಿದರು. ದುರ್ವಾಸರೂ ಸಹ ಋಕ್ಕುಗಳಿಂದ ಇಂದ್ರನನ್ನು ಸ್ತುತಿಸಿದರು. ಏಕೋ ಆ ದಿನ ದುರ್ವಾಸರ ಉಚ್ಚಾರಣೆಯಲ್ಲಿ ಸ್ಖಾಲಿತ್ಯವುಂಟಾಗುತ್ತಿತ್ತು. ಇದನ್ನು ಕೇಳಿದ ಸರಸ್ವತಿ ಜೋರಾಗಿ ನಕ್ಕುಬಿಟ್ಟಳು. ಇದನ್ನು ಕಂಡು, ದುರ್ವಾಸರಿಗೆ ಕೆಂಡದಂತಹ ಕೋಪ ಬಂದು - "ನೀನು, ಭೂಲೋಕದಲ್ಲಿ ಮಾನವಿಯಾಗಿ ಹುಟ್ಟು" ಎಂದು ಶಪಿಸಿದರು. ದೇವತೆಗಳು ದಿಗ್ಭ್ರಾಂತರಾಗಿ ತಮ್ಮ ಆಸನಗಳಿಂದ ಎದ್ದು ಬಂದು, ದುರ್ವಾಸರನ್ನು ಶಾಂತಗೊಳಿಸುತ್ತಾ, ಸರಸ್ವತಿಗೆ ವಿಶಾಪವನ್ನು ಅನುಗ್ರಹಿಸುವಂತೆ ಪ್ರಾರ್ಥಿಸಿದರು. ಶಾಂತರಾದ ಅವರು - "ನನ್ನ ಶಾಪದ ಅನುಸಾರ ಅವಳು ಭೂಲೋಕದಲ್ಲಿ ಹುಟ್ಟಲೇ ಬೇಕು. ಇವಳು ಗೃಹಿಣಿಯಾಗಿ ಬಾಳುತ್ತಿರುವಾಗ, ಸದಾಶಿವನ ಅವತಾರವಾದ ಶ್ರೀ ಶಂಕರಾಚಾರ್ಯರು, ಅವರ ಮನೆಗೆ ಬರುತ್ತಾರೆ. ಅವರ ದರ್ಶನದಿಂದ, ಶಾಪ ವಿಮೋಚನೆಯಾಗುತ್ತದೆ" ಎಂದರು. ಶಾಪಗ್ರಸ್ತಳಾದ ಸರಸ್ವತಿಯು ಭೂಲೋಕದಲ್ಲಿ ಹುಟ್ಟಿ ಭಾರತಿ - ಎಂಬ ಹೆಸರಿನಿಂದ ಮಂಡನಮಿಶ್ರರ ಪತ್ನಿಯಾದಳು. ಶ್ರೀ ಶಂಕರಾಚಾರ್ಯರು, ಮಂಡನಮಿಶ್ರರ ಮನೆಗೆ ಬಂದು, ಅವರೊಂದಿಗೆ ವಾದವಿವಾದದಲ್ಲಿ ತೊಡಗಿದಾಗ, ಭಾರತಿಯೇ ನ್ಯಾಯಮೂರ್ತಿಯ ಸ್ಥಾನದಲ್ಲಿದ್ದಳು. ಮಂಡನಮಿಶ್ರರು ವಾದದಲ್ಲಿ ಸೋತು ಸಂನ್ಯಾಸವನ್ನು ಸ್ವೀಕರಿಸಿದನಂತರ, ಭಾರತಿಯು, ಶಾಪವಿಮುಕ್ತಳಾಗಿ, ಸತ್ಯಲೋಕಕ್ಕೆ ಹೋಗಲು ಸಿದ್ಧಳಾದಳು. ಆಗ ಶಂಕರರು, ಅವಳನ್ನು ಭೂಲೋಕದಲ್ಲಿ ನೆಲೆಸುವಂತೆ ಕೇಳಿಕೊಂಡು, ಶ್ರೀ ಕೂಡಲಿ ಕ್ಷೇತ್ರದಲ್ಲಿಯೂ ಮತ್ತು ಶೃಂಗೇರಿಕ್ಷೇತ್ರದಲ್ಲಿಯೂ ನೆಲೆಸಬೇಕೆಂದು ಪ್ರಾರ್ಥಿಸಿ, ಈ ಎರಡು ಕ್ಷೇತ್ರಗಳಲ್ಲಿಯೂ ಶ್ರೀ ಶಂಕರರು ಮಠಗಳನ್ನು ಸ್ಥಾಪಿಸಿ, ಶ್ರೀ ಶಾರದೆಯನ್ನು ಪ್ರತಿಷ್ಠಾಪಿಸಿದರು.

ಭಾರವಿ, ಸಂಸ್ಕೃತದ ಮಹಾಕವಿಗಳಲ್ಲಿ ಒಬ್ಬ. ಅವನಿಗೆ ಕಾತ್ಯಾಯನಿ ಎಂಬ ಹೆಸರಿನ ಮಗಳಿದ್ದಳು. ಇವಳು ಪ್ರಕಾಂಡ ಪಂಡಿತೆ. ಇವಳ ಪ್ರತಿಭೆಗೆ ಮಾರುಹೋದ ವಿದ್ವಾಂಸರು ಇವಳನ್ನು ಆದರದಿಂದ "ಪ್ರತಿಭಾಧೀದಿತಿ" ಎಂದೇ ಕರೆಯುತ್ತಿದ್ದರು. ಇವಳಲ್ಲಿ, ತಾನೊಬ್ಬ ಮಹಾಪಂಡಿತೆ ಎಂಬ ಗರ್ವವಿತ್ತು. ಪ್ರಾಪ್ತವಯಸ್ಕಳಾದಾಗ, ಇವಳಿಗೆ ವಿವಾಹ ಮಾಡಬೇಕೆಂದು ಸಂಕಲ್ಪಿಸಿದ ಭಾರವಿ, ತನ್ನ ಉದ್ದೇಶವನ್ನು ಮಗಳಿಗೆ ತಿಳಿಸಿದನು. ಆಗ ಅವಳು "ಯಾರು ನನ್ನನ್ನು ವೇದಾಂತಚರ್ಚೆಯಲ್ಲಿ ಸೋಲಿಸುತ್ತಾರೋ, ಅವರನ್ನೇ ನಾನು ವಿವಾಹವಾಗುತ್ತೇನೆ" ಎಂದು ತನ್ನ ನಿರ್ಧಾರವನ್ನು ತಿಳಿಸಿದಳು. ಅವಳ ಈ ನಿರ್ಧಾರವನ್ನು ಪೂರೈಸುವುದು ಸುಲಭದ ಮಾತಾಗಿರಲಿಲ್ಲ. ಹಾಗಾಗಿ ಭಾರವಿ ಚಿಂತಾಕ್ರಾಂತನಾದನು. ಒಂದು ದಿನ ದೋಪದೇವ - ಎಂಬ ಹೆಸರಿನ ಶ್ರೀಕೃಷ್ಣನ ಭಕ್ತರೊಬ್ಬರು, ಭಾರವಿಯ ಮನೆಗೆ ಬಂದರು. ಅವರು ವೇದಪಂಡಿತರೂ

ಆಗಿದ್ದರು. ಅತಿಥಿ ಸತ್ಕಾರದ ನಂತರ, ಭಾರವಿ, ಅವರಿಗೆ ತನ್ನ ಮಗಳ ನಿರ್ಧಾರವನ್ನು ತಿಳಿಸಿದನು. ಅವರು ಅವಿವಾಹಿತರಾಗಿದ್ದರು. ತಾನು, ಕಾತ್ಯಾಯನಿಯೊಂದಿಗೆ ವಾದ ಮಾಡಲು ಸಿದ್ಧರಿರುವುದಾಗಿ ತಿಳಿಸಿದರು. ಬೋಪದೇವ ಮತ್ತು ಕಾತ್ಯಾಯನಿರ ಮಧ್ಯೆ ವಾದವಿವಾದ ಪ್ರಾರಂಭವಾಯಿತು. ಕೊನೆಗೆ ವಾದದಲ್ಲಿ ಕಾತ್ಯಾಯನಿ ಸೋತಳು. ಅವಳು ಬೋಪದೇವನನ್ನು ವಿವಾಹವಾಗಲು ಸಿದ್ಧಳಾದಳು. ಆದರೆ ಬೋಪದೇವ, ಅದನ್ನು ನಿರಾಕರಿಸಿ, ತನ್ನನ್ನು ಸಂಪೂರ್ಣವಾಗಿ ಶ್ರೀಕೃಷ್ಣನಿಗೆ ಸಮರ್ಪಿಸಿಕೊಂಡಿರುವುದಾಗಿ ಹೇಳಿದರು. ಬೋಪದೇವನ ಮೃದುಮನೋಹರವಾದ ಮಾತುಗಳು, ಕಾತ್ಯಾಯನಿಯ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡಿದುವು. ಅವಳಿಗೆ ತನ್ನ ದುರಹಂಕಾರದ ಅರಿವಾಗಿ, ಪಶ್ಚಾತ್ತಾಪವಾಯಿತು, ಆಗ ಬೋಪದೇವ ಅವಳಿಗೆ- ಕಾತ್ಯಾಯನಿ, ನೀನು ಯಾರು ಗೊತ್ತೆ? ದುರ್ವಾಸರ ಕೋಪವೇ ನೀನು. ಆ ಮಹರ್ಷಿ, ನಿನ್ನನ್ನು, ಶ್ರೀಕೃಷ್ಣನ ಭಕ್ತನಾದ ಅಂಬರೀಶನ ಮೇಲೆ ಪ್ರಯೋಗಿಸಿದ, ಸುದರ್ಶನ ಚಕ್ರ, ಅಂಬರೀಶನನ್ನು ರಕ್ಷಿಸಿತು. ನೆಲೆಯಿಲ್ಲದ ನೀನು ಭೂಲೋಕದಲ್ಲಿ ಹುಟ್ಟಬೇಕಾಯಿತು. ಕ್ರೋಧ ಪುತ್ರಿಯಾದ ನಿನ್ನಲ್ಲಿ, ಕ್ರೋಧ ಪ್ರತಿರೂಪವಾದ ದುರಹಂಕಾರವೂ ನೆಲೆಗೊಂಡಿತ್ತು. ಶ್ರೀಕೃಷ್ಣನ ಕೃಪೆಯಿಂದ ಈಗ ಅದು ದೂರವಾಯಿತು" ಎಂದು ಹೇಳಿದನು. ಈಗ ಅವಳು ಶ್ರೀಕೃಷ್ಣನ ಭಕ್ತೆಯಾಗಿ, ಅವನ ದರ್ಶನ ಪಡೆಯಲು, ವೃಂದಾವನಕ್ಕೆ ಬಂದಳು. ಶ್ರೀಕೃಷ್ಣನ ಧ್ಯಾನದಲ್ಲಿ ಬಹಳಕಾಲ ಕಳೆದಳು. ಕೊನೆಗೊಂದು ದಿನ, ಶ್ರೀಕೃಷ್ಣನ ದರ್ಶನವಾಯಿತು, ಅವನ ಕರೆಯಂತೆ, ದುರ್ವಾಸರ ಕ್ರೋಧ ಪುತ್ರಿಯಾದ ಕಾತ್ಯಾಯನಿ, ನಾದಲೋಲ ಶ್ರೀಕೃಷ್ಣನಲ್ಲಿ ಐಕ್ಯವಾದಳು.

ದುರ್ವಾಸರು, ದೇವೀ ಉಪಾಸಕರಾಗಿದ್ದರು. ಪ್ರಾಚೀನ ಕಾಲದ ಹನ್ನೆರಡು ಜನ ದೇವೀ ಉಪಾಸಕರಲ್ಲಿ ಇವರೂ ಒಬ್ಬರು. ಮನು, ಚಂದ್ರ, ಕುಬೇರ, ಲೋಪಾಮುದ್ರ, ಮನ್ಮಥ, ಅಗಸ್ತ್ಯ, ಅಗ್ನಿ, ಸೂರ್ಯ, ಇಂದ್ರ, ಸ್ಕಂದ, ಶಿವ - ಇವರು ಉಳಿದ ಹನ್ನೊಂದು ಜನ ದೇವೀ ಉಪಾಸಕರು. ದುರ್ವಾಸರಿಗೆ ಕೋಪ ಹೆಚ್ಚಾಗಿದ್ದದ್ದರಿಂದ ಇವರನ್ನು ಕ್ರೋಧ ಭಟ್ಟಾರಕ ಎಂದೇ ಕರೆಯುತ್ತಿದ್ದರು.

ದುರ್ವಾಸರು ಗೃಹಸ್ಥರಾಗಿದ್ದರು - ಎಂಬುದು ಪುರಾಣಗಳಿಂದ ತಿಳಿದು ಬರುವುದಿಲ್ಲ. ಆದರೆ ಗ್ರಂಥಾಂತರಗಳಲ್ಲಿ, ಇವರಿಗೆ ವಿವಾಹವಾಗಿತ್ತು ಎಂದೂ, ಇವರ ಪತ್ನಿಯ ಹೆಸರು ಕಂದಳಿ ಎಂದೂ ಇವಳು ಔರ್ವ ಋಷಿಯ ಮಗಳು ಎಂದೂ ತಿಳಿದು ಬರುತ್ತದೆ.

ಇಂತಹ ಮಹಾನ್ ಚೇತನರನ್ನು ಸ್ಮರಿಸುವುದೂ ಪುಣ್ಯಕಾರ್ಯವೇ ಹೌದು.

# ಹರಿದಾಸ ಸಾಹಿತ್ಯದಲ್ಲಿ ದೇವರ ಪರಿಕಲ್ಪನೆ

---ಪ್ರೊ|| ಬಸವರಾಜ ಪುರಾಣಿಕ.

ಬೃಹದಾರಣ್ಯಕೋಪನಿಷತ್ತಿನ ತೃತೀಯ ಅಧ್ಯಾಯದ ನವಮ ಬ್ರಾಹ್ಮಣದಲ್ಲಿ ಯಾಜ್ಞವಲ್ಕ್ಯ-ಶಾಕಲ್ಯ ಸಂವಾದ ಇಂತಿದೆ:

"ಯಾಜ್ಞವಲ್ಕ್ಯ ದೇವಗಣ ಎಷ್ಟಿವೆ ?" - ಶಾಕಲ್ಯ ವಿದಗ್ಧ ಕೇಳಿದ.

"ವೈಶ್ವದೇವನ ನಿವಿದ್‌ದಲ್ಲಿ ಅರ್ಥಾತ್ ದೇವತೆಗಳ ಸಂಖ್ಯೆಯನ್ನು ತೋರಿಸುವ ಮಂತ್ರಪದಗಳಲ್ಲಿ ಹೇಳಿರುವ ಪ್ರಕಾರ ಮೂರು ಸಾವಿರ ಮೂರು ನೂರು ಆರು ದೇವಗಣರಿದ್ದಾರೆ" - ಯಾಜ್ಞವಲ್ಕ್ಯ ಉತ್ತರಿಸಿದ.

"ಸರಿ, ಯಾಜ್ಞವಲ್ಕ್ಯ ಎಷ್ಟು ದೇವರು ಇದ್ದಾರೆ?" - ಪುನಃ ಶಾಕಲ್ಯ ಕೇಳಿದ.

"ಮುವ್ವತ್ತು ಮೂರು" - ಯಾಜ್ಞವಲ್ಕ್ಯ ಉತ್ತರಿಸಿದ.

"ಸರಿ, ಯಾಜ್ಞವಲ್ಕ್ಯ ಹಾಗಿದ್ದರೆ ದೇವರ ಸಂಖ್ಯೆ ಎಷ್ಟು?" ಶಾಕಲ್ಯ ಮತ್ತೆ ಕೇಳಿದ.

"ಆರು."

"ಸರಿ. ಯಾಜ್ಞವಲ್ಕ್ಯ ಎಷ್ಟು ದೇವರು ಇದ್ದಾರೆ?" - ಶಾಕಲ್ಯ ಪುನಃ ಕೇಳಿದ.

"ಮೂರು."

"ಸರಿ. ಯಾಜ್ಞವಲ್ಕ್ಯ ಎಷ್ಟು ದೇವರು ಇದ್ದಾರೆ?"

"ಒಂದೂವರೆ"

"ಸರಿ. ಯಾಜ್ಞವಲ್ಕ್ಯ ದೇವರ ಸಂಖ್ಯೆ ಎಷ್ಟು?"

"ಒಂದು"

"ಸರಿ. ಹಾಗಿದ್ದರೆ ಮೂರು ಸಾವಿರ ಮೂರು ನೂರು ಆರು ದೇವರು ಯಾರು?" - ಶಾಕಲ್ಯ ಕೇಳಿದ.

"ಅವೆಲ್ಲ ಅವರ ಮಹಿಮೆಗಳು"

ಬಳಿಕ, ಯಾಜ್ಞವಲ್ಕ್ಯ ಒಬ್ಬನೇ ಒಬ್ಬನಾದ ದೇವರ ಬ್ರಹ್ಮಣ - ಬಗ್ಗೆ ಹೀಗೆ ವಿವರಿಸುತ್ತಾನೆ:

ಈ ಬ್ರಹ್ಮ ಅಪ್ರಮೇಯ, ಧ್ರುವ, ನಿರ್ಮಲ, ಅವ್ಯಾಖ್ಯಾಕೃತ, ಆಕಾಶಕ್ಕಿಂತಲೂ ಸೂಕ್ಷ್ಮ ಅಜನ್ಮ ಆತ್ಮ ಮಹಾನ್ ಹಾಗೂ ಅವಿನಾಶಿ ಆಗಿರುವುದು. ಬುದ್ಧಿಮಾನ್ ಬ್ರಾಹ್ಮಣ ಅದನ್ನೇ ತಿಳಿದುಕೊಳ್ಳಬೇಕು; ಅದರಲ್ಲಿಯೇ ಪ್ರಜ್ಞೆಮೂಡಬೇಕು. ಬಹಳ ಶಬ್ದಗಳ ಅನುಧ್ಯಾನ (ನಿರಂತರ ಚಿಂತನ) ಮಾಡಬಾರದು. ಅದಂತೂ ವಾಣಿಯ ಶ್ರಮವಾಗಿರುವುದು.

-ಬೃಹದಾರಣ್ಯಕೋಪನಿಷತ್ ೪:೪:೨೧.



ಈ ಸಂವಾದ ಭಾರತೀಯ ಮನ ಮೆಚ್ಚುವ, ನೆಚ್ಚುವ ದೇವರ ಪರಿಕಲ್ಪನೆಗೆ ಬರೆದ ವ್ಯಾಖ್ಯಾನದಂತಿದೆ.

ಮಾನವ ಚೇತನದ ದೇವಮುಖೀ ಪ್ರಯಾಣವು ಯುಗಯುಗಗಳಿಂದಲೂ ಹಿಗ್ಗುತ್ತ ನಡೆದಿದೆ. "ಹಿಗ್ಗು" ಶಬ್ದಕ್ಕೆ ಆನಂದ ಪಡು, ಹುರುಪಾಗು, ಅಗಲವಾಗು ಎಂಬ ಅರ್ಥಗಳಿವೆ. ಇಲ್ಲಿ "ಹಿಗ್ಗು" ಪದವು ಪ್ರತಿ ಅರ್ಥದಲ್ಲಿಯೂ ಧ್ವನಿಪೂರ್ಣವಾಗಿದೆ. ದೇವರ ಗುಹ್ಯತೆಯನ್ನು ಕೆಣಕಿ ಅದರ ರಹಸ್ಯವನ್ನು ಅರಸುತ್ತ ಸೆಣಸುವಾಗ ಎಲ್ಲೋ 'ರಜತ ರೇಖೆ' ಮಿಂಚಿದಂತಾದಾಗ ಆನಂದ ಪಡುವುದು, ತನ್ನ ಪ್ರಯಾಸಕ್ಕೆ ಫಲ ದೊರೆಯುತ್ತಿದೆಯೆಂದು ಮನಗಂಡು ಮುಂದುವರೆಯಲು ಹುರುಪಾಗುವುದು, ಹಾಗೂ ಈ ನಿರಂತರ ಸಾಧನೆಯು ಕಾಲಕ್ರಮದಲ್ಲಿ ಅಗಲವಾಗುವುದು - ಇದು ಮಾನವನು ದೇವರನ್ನು ಪರಿಕಲ್ಪಿಸುವ ಚಿರಂತನ ಪ್ರಯತ್ನ.

ಹರಿ ಸರ್ವೋತ್ತಮತ್ವವನ್ನೇ ತಮ್ಮ ಉಸಿರನ್ನಾಗಿಸಿಕೊಂಡು, ಶ್ರೀಹರಿಯೇ ಸರ್ವೋತ್ತಮ, ತಾನು ಆತನ ದಾಸನೆಂಬ ನಿತ್ಯ ಸತ್ಯ ತತ್ವವನ್ನು ಅರಿತು, ಅನುಸರಿಸಿ, ಅದರಂತೆ ಅನುಕ್ಷಣ ಅನುಷ್ಠಾನಗೈಯುವ ಭಕ್ತನೇ ನಿಜವಾದ ಹರಿದಾಸ. ಪ್ರಪಂಚ ವಿರಕ್ತಿಯ ಜೊತೆಗೆ ಹರಿಭಕ್ತಿಯಿಂದ ಪೂರಿತನಾಗಿ ತನ್ನ ಜೀವಿತ ಸರ್ವಸ್ವವನ್ನು ಸರ್ವೇಶನಿಗೆ ಸಮರ್ಪಿಸಿದ ಹರಿದಾಸನಿಗೆ ಆನಂದ ತೀರ್ಥರು ಬೋಧಿಸಿದ ದ್ವೈತ ದರ್ಶನವು ಚೇತನವಾಗಿದೆ. ಆ ಬೆಳಕಿನಲ್ಲಿ ಮುನ್ನಡೆದು ಆತ್ಮ ಸಾಕ್ಷಾತ್ಕಾರ ಮಾಡಿಕೊಂಡ ಹರಿದಾಸರ ಸಾಹಿತ್ಯದಲ್ಲಿ "ಹರಿ ಪಾರಮ್ಯ"ವು ಪ್ರತಿಬಿಂಬಿತವಾಗಿರುವುದು ಹಾಗೂ ಪ್ರತಿಪಾದಿತವಾಗಿರುವುದು ಸಹಜವೆ.

"ಶ್ರೀಹರಿ ಸರ್ವೋತ್ತಮತೆ"ಯ ಪರಿಕಲ್ಪನೆಯನ್ನು ಹೀಗೆ ಗ್ರಹಿಸಲಾಗಿದೆ;

ಅಶೇಷಗುಣ ಪೂರ್ಣತ್ವಂ<br>
ಸರ್ವದೋಷ ಸಮುಜ್ಝತಿಃ<br>
ವಿಷ್ಣೋಃಶೇನ್ನಚ್ಚ ತತ್ತಂತ್ರಂ<br>
ಇತಿ ಸಮ್ಯಗ್ ವಿನಿರ್ಣಯಃ

ಅನು ವ್ಯಾಖ್ಯಾನ, ಆನಂದ ತೀರ್ಥರು<br>
೧-೧-೧೧.

ಸರ್ವಗುಣ ಪರಿಪೂರ್ಣನಾಗಿದ್ದು, ಸರ್ವದೋಷದೂರನಾಗಿರುವುದು ಹಾಗೂ ಇತರ ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡಿರುವುದು, - ಇದೇ ಸರ್ವೋತ್ತಮದ ಲಕ್ಷಣ. ಇದು ಶ್ರೀಹರಿಯಲ್ಲಿ ಮಾತ್ರ ಇದೆಯೆನ್ನಲಾಗಿದೆ.

ಹರಿ ಸರ್ವೋತ್ತಮತ್ವದಂಥ ಕಠಿಣ ಪ್ರಮೇಯಗಳನ್ನು ಹರಿದಾಸರು ತಮ್ಮ ಕೀರ್ತನೆಗಳ ಮೂಲಕ ಶ್ರೀ ಸಾಮಾನ್ಯನಿಗೆ ತಲುಪಿಸಿದರು. ಸದಾ ಹರಿಸ್ಮರಣೆಯಲ್ಲಿ ತಲ್ಲೀನರಾಗಿರುತ್ತಿದ್ದ ಅವರಿಗೆ ಮುಂಜಾವಿನ ಕೋಳಿಯ ಕೂಗಿನಲ್ಲಿ, ಡಂಗುರದ ರಿಂಗಣದಲ್ಲಿ "ಹರಿ ಪಾರಮ್ಯತೆ"ಯು ಕೇಳಿಸುತ್ತದೆ. ಹರಿಸ

## ತಿರುಮಲೆ -- ತಿರುಪತಿ ದೇವಸ್ಥಾನಗಳು -- ತಿರುಪತಿ.

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನಿ ಯೋಜನೆ

ಶ್ರೀ ವೆಂಕಟೇಶ್ವರಸ್ವಾಮಿಯ ಸನ್ನಿಧಿಯಿರುವ ತಿರುಮಲೆ ಪ್ರಾಚೀನ ಕಾಲದಿಂಲೂ ಯಾತ್ರಿಕರ ಆಕರ್ಷಣಕೇಂದ್ರವಾಗಿದೆ. ಪ್ರತಿದಿನವೂ ಸಾವಿರಾರು ಮಂದಿ ಭಕ್ತ ಯಾತ್ರಿಕರು ತಮ್ಮ ಐಹಿಕ ಆಧ್ಯಾತ್ಮಿಕ ಅಭಿವೃದ್ಧಿಗಾಗಿ ಇಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ತಿ. ತಿ. ದೇವಸ್ಥಾನಗಳು ಮಾನವಸೇವೆಯಲ್ಲಿ ಶ್ರದ್ಧಾಪೂರ್ವಕವಾಗಿ ಭಾಗವಹಿಸುವ ಪರಂಪರೆಯನ್ನು ಹೊಂದಿದೆ. ಕುಷ್ಠರೋಗ ನಿವಾರಣಾಕೇಂದ್ರ, ಅಂಗವಿಕಲರ ಅಭಿವೃದ್ಧಿ ಕೇಂದ್ರ, ಅನಾಥ ಶರಣಾಲಯ, ಕೇಂದ್ರ ಆಸ್ಪತ್ರೆ ಮೊದಲಾದವನ್ನು ತಿ.ತಿ.ದೇ. ಯಶಸ್ವಿಯಾಗಿ ನಿರ್ವಹಿಸುತ್ತಿದೆ. ಜನಕ್ಕೆ ವಿಶೇಷ ಆಧುನಿಕ ವೈದ್ಯಕೀಯ ಸೇವೆ ಸಲ್ಲಿಸಲು ಸ್ವಾಮಿಯ ಆಶೀರ್ವಾದದ ಬೆಂಬಲದಿಂದ ಶ್ರೀ ವೆಂಕಟೇಶ್ವರ ವೈದ್ಯಕೀಯ ಸಂಸ್ಥೆ (ಸ್ವಿಮ್ಸ್)ಯನ್ನು -- ದೆಹಲಿ, ಅಜ್ಮೀರ, ಪಾಂಡಿಚೇರಿ, ಚಂಡೀಘರ್‌ಗಳ ಆಲಿಂಡಿಯಾ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ಮಾದರಿಯಲ್ಲಿ ಆರಂಭಿಸಲಾಗಿದೆ. ಶ್ರೀ ವೆಂಕಟೇಶ್ವರ ವೈದ್ಯವಿಜ್ಞಾನ ಸಂಸ್ಥೆಯ ಮೂಲ ಉದ್ದೇಶ -- ಮನುಷ್ಯನ ಸರ್ವಾಂಗೀಣ ಆರೋಗ್ಯಸಾಧನೆ -- ಇಲ್ಲಿ ವೈದ್ಯಸೇವೆ, ವೈದ್ಯವಿಜ್ಞಾನದ ಶಿಕ್ಷಣ -- ತರಬೇತಿಗಳೊಡನೆ ಸಂಶೋಧನೆ ಅಭಿವೃದ್ಧಿಯನ್ನೂ ನಡೆಸಲಾಗುವುದು.

ಇಂತಹ ವೈದ್ಯವಿಜ್ಞಾನದ ಬಾಗಿಲು ನಮ್ಮಲ್ಲಿನ ಎಲ್ಲರಿಗೂ ತೆರೆದಿರಬೇಕು. ಅದನ್ನು ಸಾಧಿಸಲೆಂದೇ ಶ್ರೀ ಬಾಲಾಜಿ ಆರೋಗ್ಯವರ ಪ್ರಸಾದಿನಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ವಿಶೇಷ ತಜ್ಞ ವೈದ್ಯಕೀಯ ಸೇವೆಯು ಎಲ್ಲರಿಗೂ ಸುಲಭವಾಗಿ ದೊರೆಯುವಂತೆ ಮಾಡಲು ದಾನಿಗಳಿಂದಲೂ ಸಾರ್ವಜನಿಕರಿಂದಲೂ ಉದಾರವಾದ ದೇಣಿಗೆಗಳನ್ನು ನಿರೀಕ್ಷಿಸಲಾಗಿದೆ.

ಯೋಜನೆಯ ಸಾರಾಂಶ ಹೀಗಿದೆ :---

* ದಾನಿಗಳು ರೂ 1000-- ಅಥವಾ ಗುಣಕಗಳಲ್ಲಿ ದಾನ ನೀಡಬಹುದು. ಅದಕ್ಕೆ ಸಮನಾದ ಧನವನ್ನು ತಿ.ತಿ.ದೇ. ಸೇರಿಸಿ ಮೊತ್ತದ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿರಿಸಿ ಅದರ ಬಡ್ಡಿಯನ್ನು ಬಡವರ, ವೈದ್ಯಕೀಯ ಚಿಕಿತ್ಸೆಗಾಗಿ ಬಳಸಲಾಗುವುದು.
* ಹತ್ತು ಲಕ್ಷ ಹಾಗೂ ಹೆಚ್ಚಿನ ಧನವನ್ನು ನೀಡುವವರ ಹೆಸರಿನಲ್ಲಿ ಒಂದು ಸಂಶೋಧನ ಪೀಠವನ್ನು ಸ್ಥಾಪಿಸಲಾಗುವುದು.
* ದಾನವನ್ನು ವ್ಯಕ್ತಿ / ಕುಟುಂಬ / ಕಂಪನಿ / ಯಾರಾದರೂ ಮಾಡಬಹುದು.
* ಐದು ಲಕ್ಷ ರೂಗಳಿಗಿಂತ ಹೆಚ್ಚಿಗೆ ದಾನ ನೀಡುವವರ ಹೆಸರನ್ನು ಸಂಸ್ಥೆಯ ಸ್ವಾಗತಕಚೇರಿಯಲ್ಲಿ ಬರೆದು ಪ್ರದರ್ಶಿಸಲಾಗುವುದು.
* ಪ್ರಯೋಜನ ಪಡೆದು ಆರೋಗ್ಯಹೊಂದಿದವರ ಡಿಸ್ಚಾರ್ಜ್ ಚೀಟಿಯಲ್ಲಿ ದಾನಿಗಳ ಹೆಸರನ್ನು ನಮೂದು ಮಾಡಲಾಗುವುದು.

## ದಾನಿಗಳಿಗೆ ನೀಡಲಾಗುವ ಸೌಕರ್ಯಗಳು :

* ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನಿ ಯೋಜನೆಗೆ ನೀಡಲಾದ ದಾನ 80 ಜಿ. ಕಲಮಿನನ್ವಯ ಆದಾಯಕರ ಮುಕ್ತ.
* ಆಸ್ಪತ್ರೆಯಲ್ಲಿ ದಾನಿಗಳ ಕುಟುಂಬಕ್ಕೆ ಬಾಡಿಗೆ ಕೋಣೆ ಹವಾನಿಯಂತ್ರಿತ ಕೋಣೆಗಳನ್ನು ನೀಡಲಾಗುವುದು
* 5 ಲಕ್ಷ ಮತ್ತು ಹೆಚ್ಚಿನ ಹಣದ ದಾನಿಗಳ ಹೆಸರಿನಲ್ಲಿ ಬಾಡಿಗೆ ಕೋಣೆಗಳನ್ನೂ ನಿರ್ಮಿಸಲಾಗುವುದು.
* 5 ಲಕ್ಷ ಹಾಗೂ ಹೆಚ್ಚಿನ ಹಣದ ದಾನದಿಂದ ದಾನಿಗಳು ಪ್ರತಿವರ್ಷ ಒಂದು ಚಿಕಿತ್ಸೆಯನ್ನು ಪ್ರಾಯೋಜಿತಗೊಳಿಸಬಹುದು.
* ದಾನಿಗಳು ಒಳರೋಗಿಗಳ, ಹೊರರೋಗಿಗಳ, ಆಹಾರಕ್ಕಾಗಿಯೂ ನೀಡಬಹುದು. ಸಂಸ್ಥೆಯಲ್ಲಿನ ವಾರ್ಷಿಕ ಸಾರಿಗೆ ವೆಚ್ಚಗಳಿಗೂ ನೀಡಬಹುದು.

  ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ -- ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು -- ನಿರ್ದೇಶಕರು ಶ್ರೀ ವೆಂಕಟೇಶ್ವರ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ -- ಇವರಿಗೆ ಕಳುಹಿಸುತ್ತ ಜೊತೆಗೇ ಕೆಳಕಂಡ ವಿವರಗಳನ್ನೂ ಎಲ್ಲ ದಾನಿಗಳೂ ನೀಡಬೇಕು.

* ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚಿನ ಹಣ ದಾನಮಾಡುವವರ ಹೆಸರು ವಿಳಾಸಗಳೊಡನೆ ಅವರ ಮನೆಯ ಎಲ್ಲ ಸದಸ್ಯರ ಪಾಸ್‌ಪೋರ್ಟ್ ಸೈಜಿನ ಈಚಿನ ಭಾವಚಿತ್ರ ವಿರಬೇಕು.
* ಆದಾಯತೆರಿಗೆ ವಿನಾಯತಿಯ ಪ್ರಮಾಣ ಪತ್ರವನ್ನು ಯಾರ ಹೆಸರಿಗೆ ನೀಡಬೇಕು ಎಂಬುದು.
* ದಾನಿಗಳು ಇತರತ್ರ ಯಂತ್ರ ಉಪಕರಣಗಳನ್ನು ನೀಡಲೂ ಅವಕಾಶವಿದೆ, ಅಥವಾ ವಾಹನಗಳನ್ನೂ ನೀಡಬಹುದಾಗಿದೆ. ಗ್ರಾಮೀಣ ಪ್ರಾಂತ್ಯಗಳಲ್ಲಿ ತಿ. ತಿ. ದೇವಸ್ಥಾನಗಳ ಆರೋಗ್ಯವಿಸ್ತರಣಾ ಶಿಬಿರಗಳನ್ನೂ ಪ್ರಾಯೋಜಿತಗೊಳಿಸಬಹುದು.

ಮಿಕ್ಕ ವಿಷಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ--

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ, ತಿರುಪತಿ, ದೇವಸ್ಥಾನಗಳು -- ತಿರುಪತಿ.

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್ಸಿಟಿಟ್ಯೂಟ್ ಆಫ್
ಮೆಡಿಕಲ್ ಸೈನ್ಸಸ್, ತಿರುಪತಿ.

ರ್ವೋತ್ತಮತ್ವವನ್ನು ಮನಗಾಣಿಸಲು ಅವರು ಜಿದ್ದು ಕಟ್ಟಲು, ಪ್ರತಿಜ್ಞೆಗೈಯಲು ಹಿಂಜರಿಯುತ್ತಿದ್ದಿಲ್ಲ.

ಪುರಂದರದಾಸರ ಈ ಕೀರ್ತನೆಯಲ್ಲಿ ಹರಿಸ ರ್ವೋತ್ತಮತ್ವದ ಪರಿಕಲ್ಪನೆಯನ್ನು ಕಾಣ ಬರುವುದು :

ಈ ಪರಿಯ ಸೊಬಗಾವ ದೇವರಲಿ ಕಾಣೆ
ಗೋಪಿಜನ ಪ್ರಿಯ ಗೋಪಾಲದಲ್ಲದೆ

ದೊರೆಯತನದಲಿ ನೋಡೆ
ಧರಣಿದೇವಿಗೆ ರಮಣ
ಸಿರಿಯತನದಲಿ ನೋಡೆ ಶ್ರೀಕಾಂತನು
ಹಿರಿಯತನದಲಿ ನೋಡೆ
ಸರಸಿಜೋದ್ಭವನಯ್ಯ
ಗುರುವತನದಲಿ ನೋಡೆ ಜಗದಾದಿ ಗುರುವು

ಪಾವನತ್ವದಿ ನೋಡೆ ಅಮರಗಂಗಾಜನಕ
ದೇವತ್ವದಲಿ ನೋಡೆ ದಿವಿಜರೊಡೆಯ
ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ
ಕಾವ ಧೈರ್ಯದಿ ನೋಡೆ ಅಸುರಾಂತಕ

ಗಗನದಲಿ ಸಂಚರಿಪ ಗರುಡದೇವನೆ ತುರಗ
ಜಗತೀರ್ಥ ಶೇಷ ಪರಿಯಂಕ ಶಯನ
ನಿಗಮಗೋಚರ ಪುರಂದರ ವಿಠಲಗಲ್ಲದೆ
ಮಿಗಿಲಾದ ದೈವಗಳಿಗೀ ಭಾಗ್ಯವುಂಟೆ ? || ೩ ||

ದೊರೆತನ, ಸಿರಿತನ, ಹಿರಿತನ, ಗುರುತನ - ಇವು ವ್ಯಕ್ತಿತ್ವದ ಉತ್ಕೃಷ್ಟತೆಯನ್ನು ನಿರ್ಧಾರಿಸುವ ಅಂಶಗಳು. ಅದರಂತೆ ಪಾವನತ್ವ, ದೇವತ್ವ, ಲಾವಣ್ಯ ಮೊದಲಾದವುಗಳಿಗೆ ಪೂರಕವಾಗಿ ನಿರವಧಿಕವಾದ ಸಿರಿತನ, ದೊರೆತನ ಮೊದಲಾದವೆಲ್ಲ ವಿಷ್ಣುವಿನಲ್ಲಿ ಮಾತ್ರವಿರುವುವು. ಆದ್ದರಿಂದ ಆತನೇ ಸರ್ವೋತ್ತಮ ಎಂದು ಬಾಣಾಕ್ಷತೆಯಿಂದ ಕೂಡಿದ ಈ ವರ್ಣನೆ ಅಸದೃಶವಾಗಿದೆ. ಪರಮತ ದೂಷಣೆಯಿಲ್ಲದೆ ಸ್ವಮತ ಶ್ರೇಷ್ಠತೆಯನ್ನು ಮೆರೆಯಿಸಿದ ಈ ಕಲೆ ಮೋಹಕವಾಗಿದೆ.

ದಾಸಸಾಹಿತ್ಯದಲ್ಲಿ ಹರಿಸರ್ವೋತ್ತಮತ್ವದ ನಿರೂಪಣೆ ಮುಖ್ಯವಾಗಿ ಎರಡು ಮುಖಗಳಲ್ಲಿ ಕಂಡುಬರುತ್ತದೆ. ರಾಮಾಯಣ, ಮಹಾಭಾರತಾದಿ ಪೌರಾಣಿಕ ಕಥನಗಳ ಹಿನ್ನೆಲೆಯಲ್ಲಿ ಕಂಡುಬರುವ ನಿರೂಪಣೆಯು ಒಂದು ಮುಖವಾದರೆ, ಹರಿಸರ್ವೋತ್ತಮತ್ವಕ್ಕೆ ಪೂರಕವಾದ ಜ್ಞಾನಾನಂದಾದಿ ಗುಣಪೂರ್ಣತ್ವ, ಸರ್ವವ್ಯಾಪಿತ್ವ, ಸಕಲ ದೋಷದೂರತ್ವ, ಪರಮಸ್ವಾತಂತ್ರ್ಯ, ಸ್ವಗತಿಭೇದ ವಿವರ್ಜತತ್ವ, ಸೃಷ್ಟ್ಯಾದ್ಯಷ್ಟ ಕರ್ತೃತ್ವ - ಈ ಮೊದಲಾದ ಶಾಸ್ತ್ರೀಯ ಪ್ರಮೇಯಗಳ ಮೂಲಕ ನಡೆಯುವ ನಿರೂಪಣೆಯು ಇನ್ನೊಂದು ಮುಖದ್ದಾಗಿದೆ.

ಎಲ್ಲಿ ನೋಡಲು ನೀನಿಲ್ಲದ ಸ್ಥಳವಿಲ್ಲ
ಎಲ್ಲರಂತರ್ಯಾಮಿ ಎಲ್ಲ ಪೂರ್ಣನು ನೀನೆ
ಹುಲ್ಲುಕಾಷ್ಠ ಅಚೇತನಗಳಲ್ಲಿ ನೀ
ನಿಲ್ಲದಿಲ್ಲವೆಂದು ಎಲ್ಲ ಸಾರುತಲಿವೆ

ಎಂದು ಗೋಪಾಲದಾಸರು ದೇವರ ಅಂತರ್ಯಾಮಿತ್ವವನ್ನು ಅರುಹಿದ್ದಾರೆ.

ಹೊರಗಿಪ್ಪ ಒಳಗಿಪ್ಪ ಹೊರಗಿರಲರಿಯ
ಒಳಗಿಪ್ಪ ಹೊರಗಿಪ್ಪ ಒಳಗಿರಲರಿಯ
ಒಳಗೆ ಹೊರಗೆ ತುಂಬಿಕೊಂಡಿಹ
ತಾನಿಲ್ಲದ ಠಾವು ಎಳ್ಳಿನಷ್ಟಿಲ್ಲ
ಸರ್ವವಿಷ್ಣು ವಾಸುದೇವ ಪರಿಪೂರ್ಣ

ಎಂದು ಪುರಂದರದಾಸರು ಪರಮಾತ್ಮನ ಸರ್ವವ್ಯಾಪಿತ್ವವನ್ನು ಪರಿಚಯಿಸಿದ್ದಾರೆ.

ಪರಮಾತ್ಮನ ಅಚಿಂತ್ಯಾದ್ಭುತ ಶಕ್ತಿ, ಅಘಟಿತಘಟನಾ ಸಾಮರ್ಥ್ಯಗಳನ್ನು ಜಗನ್ನಾಥದಾಸರು ಹೀಗೆ ವಿವರಿಸಿದ್ದಾರೆ :

ಅಣುಮಹತ್ತಿನೊಳಿಪ್ಪ ಘನಪರ
ಮಣುವಿನೊಳಡಗಿಸುವ ಸೂಕ್ಷ್ಮವ
ಮುಣುಗಿಸುವ ತೇಲಿಸುವ ಸ್ಥೂಲಗಳನು

ಗೋಪಾಲದಾಸರು ಇವುಗಳನ್ನೇ ಇನ್ನೊಂದು ಬಗೆಯಲ್ಲಿ ಚಿತ್ರಿಸಿದ್ದಾರೆ :

ಕಣ್ಣು ಮಾಡುವ ಕಾರ್ಯ
ಕರ್ಣ ಮಾಡುವವೊ ನಿನ್ನ
ಕರ್ಣ ಮಾಡುವ ಕಾರ್ಯ ಕಣ್ಣು ಮಾಡುವವಯ್ಯಾ!

ಮಹಿಪತಿರಾಯರು ಪರಮಾತ್ಮನ ಸರ್ವವ್ಯಾಪಿತ್ವವನ್ನು ಹೀಗೆ ವರ್ಣಿಸುವರು :

ಅಣುರೇಣುದೊಳೀತ ಅನುಕೂಲನಾದಾತ
ಆನಂದೋ ಬ್ರಹ್ಮ ಅನಂತನೀತ
ಮಹಾಮಹಿಮನಹುದೀತ ಬಾಹ್ಯಾಂತಪೂರಿತ

ಅಂತ್ರ ಬಾಹ್ಯವ್ಯಾಪಕನಾಗಿರಲಿಕ್ಕೆ
ತಂತ್ರ ಮಂತ್ರಗಳ್ಯಾತಕ್ಕೆ

ಪರಮಾತ್ಮನ ಸೃಷ್ಟ್ಯಾದ್ಯಷ್ಟಕರ್ತೃತ್ವವನ್ನು ಪುರಂದರದಾಸರು ಹೀಗೆ ಪ್ರಸ್ತಾಪಿಸಿದ್ದಾರೆ :

ವಿಶ್ವತೋ ಮುಖ ನೀನೆ ವಿಶ್ವತಶ್ಚಕ್ಷು ನೀನೆ
ವಿಶ್ವತೋ ಬಾಹು ವಿಶ್ವಪಾದನು ನೀನೆ
ವಿಶ್ವ ಉದರ ನೀನೆ ವಿಶ್ವವ್ಯಾಪಕ ನೀನೆ
ವಿಶ್ವ ನಾಟಕ ಸೂತ್ರಧಾರಿಯೇ ವಿಷ್ಣು

ಜಗವ ಪುಟ್ಟಿಸಿ ನೀನು ಜಗದೊಳಗಿರುವೆ
ಜಗದೊಳ ಹೊರಗೆ ನೀನೆ ಪೂರ್ಣ
ಜಗವನ್ನನಾಗಿ ಜಗವ ಸಂಹರಿಸುವಿ
ಜಗದೊಳ ಹೊರಗೆ ನೀನೆ ಸ್ವತಂತ್ರ
ಜಗದೇಕವಸ್ತು

ಜಗದ ಚಲನವಲನಗಳೆಲ್ಲವು ನಿರಂತರವಾಗಿ ನಿಶ್ಚಿತರೂಪದಲ್ಲಿ ನಡೆಯಿಸಿಕೊಂಡು ಹೋಗುತ್ತಿರುವ ದೇವರ ಕಟ್ಟುನಿಟ್ಟಿನ ಕಟ್ಟಳೆಗಳನ್ನು ಪುರಂದರದಾಸರು ತಿಳಿಹಾಸ್ಯದಲ್ಲಿ ಹೀಗೆ ವ್ಯಕ್ತಪಡಿಸಿದ್ದಾರೆ

ಚಂದಿರಗೊಂದು ಕ್ಷಣ ನಿಂದಿರೆ ತೆರವಿಲ್ಲ
ಇಂದ್ರಾದಿಗಳಿಗೆ ಕುಳ್ಳಿರಲಿಕ್ಕೊತ್ತಿಲ್ಲ
ಒಂದು ಕ್ಷಣವಾದರೂ ಸೂರ್ಯಾದಿಗಳಿಗೆ
ನಿಂದು ತಲೆತುರಿಸಿಕೊಳ್ಳಲು ಹೊತ್ತಿಲ್ಲ
ಪುರಂದರ ವಿಠಲರಾಯ ಕಟ್ಟರಸು ಕಾಣಿರೊ

ವಿಷ್ಣು ವಿವಿಧ ರೂಪಗಳಿಂದ ಜಗತ್ತಿಗೆ ಸೃಷ್ಟಿ, ರಕ್ಷಣ, ಲಯ ಹಾಗೂ ಮುಕ್ತಿಗಳನ್ನು ಒದಗಿಸುವನು ಎಂಬ ವಿಚಾರವನ್ನು ಪುರಂದರದಾಸರು ಹೀಗೆ ಸಾರಿದ್ದಾರೆ :

ವಿಶ್ವನೆನಿಸಿ ವಿಶ್ವದ ಜಾಗರವ ಪ್ರೇರಿಸುವೆ ದೇವ
ತೈಜಸನೆನಿಸಿ ಲೋಕದ
ಸ್ವಾಪನಗೈದಿಸುವೆ ದೇವ
ಪ್ರಾಜ್ಞನೆನಿಸಿ ಲೋಕವ
ಸುಪ್ತಿಯ ಐದಿಸುವೆ ದೇವ
ತುರೀಯನೆನಿಸಿ ಚೇತನರಿಗೆ
ಪರಗತಿಯ ಐದಿಸುವೆ ದೇವ
ಆತುಮ ಅಂತರಾತುಮ ನೆನಿಸಿ
ಶುಭಸಾರವ ನೀ ಭೋಗಿಪೆ ದೇವ
ಅನಿರುದ್ಧನೆನಿಸಿ ಲೋಕದ
ಆದಿಯಲ್ಲಿ ಸೃಜಿಸುವ ದೇವ
ಪ್ರದ್ಯುಮ್ನನೆನಿಸಿ ಲೋಕದ
ಅನುವರಿತು ಪಾಲಿಸುವ ದೇವ
ಸಂಕರುಷಣ ನೆನಿಸಿ ಲೋಕವ
ನಿನ್ನೊಳಗಿಡುವೆ ದೇವ
ವಾಸುದೇವನೆನಿಸಿ ಜೀವದ
ಕೈವಲ್ಯವನೀವೆ ದೇವ
ಸರ್ವವ್ಯಾಪಾರಕ್ಕೆ
ಕಾರಣ ನೀನೆ ದೇವ

ಹರಿದಾಸರು ದೇವರನ್ನು ಕುರಿತು ಪರಿಕಲ್ಪಿಸಿದ ವಿವಿಧ ಭಾವಗಳಿಗೆ ಪುರಂದರದಾಸರ ಈ ಗೀತೆ ಕೈಗನ್ನಡಿ ಹಿಡಿದಂತಿದೆ.



# ಶ್ರೀನಿವಾಸ ವೈಭವದ ಕನ್ನಡಿ

ಶ್ರೀನಿವಾಸ ವೈಭವ

ಬ.ನ. ಗುಂಡೂರಾವ್

ಸಂ : ರಘುಸುತ. ಪ್ರ : ಬ.ನ. ಗುಂಡೂರಾವ್ ಸ್ಮಾರಕ-ಗ್ರಂಥಮಾಲೆ. ಸಾಧುಮಠ, ಸಾಧು-ಭಾವಿ ರಸ್ತೆ. ಚಿಕ್ಕಬಳ್ಳಾಪುರ.

ಬೆಲೆ - ರೂ. 25 ಪುಟಗಳು - 136.

"ಸಪ್ತಗಿರಿ"ಯ ವಾಚಕ ಬಂಧುಗಳಿಗೆ ತಮ್ಮ ಸೊಗಡಿನಿಂದ ಕೂಡಿದ ಆಧ್ಯಾತ್ಮ ಸಾಹಿತ್ಯದ ಮೂಲಕ ನೆನಪಿನಲ್ಲಿ ಉಳಿದಿರುವ ಕೀರ್ತಿಶೇಷ ಬ.ನ. ಗುಂಡೂರಾವ್ ಅವರ ಬರಹಗಳನ್ನು ಸಂಗ್ರಹಿಸಿ ಪ್ರಕಟಿಸುತ್ತಿರುವ ಬ.ನ. ಗುಂಡೂರಾವ್ ಸ್ಮಾರಕ ಗ್ರಂಥಮಾಲೆಯ ಎರಡನೆಯ ಪ್ರಕರಣೆ 'ಶ್ರೀನಿವಾಸ ವೈಭವ'.

ಮೊದಲ ಕೃತಿಯಾದ 'ಶುಭತಾಂಬೂಲ'ದಲ್ಲಿ ಕಂಡುಬಂದಿದ್ದ ಕೆಲವೊಂದು ಅರಕೆಗಳನ್ನು ತುಂಬಿಕೊಂಡು ಪೂರ್ಣತ್ವವನ್ನು ಹೊಂದುವತ್ತ ಅಡಿಯಿರಿಸಿರುವುದೇ 'ಶ್ರೀನಿವಾಸ ವೈಭವ' ಕೃತಿಯ ವಿಶೇಷವಾಗಿದೆ. ಸಪ್ತಗಿರಿಯಲ್ಲಿ ಪ್ರಕಟವಾಗಿದ್ದ ಲೇಖನಗಳು ಎಂದು ಕೃತಜ್ಞತಾಪೂರ್ವಕವಾಗಿ ಸ್ಮರಿಸಿರುವುದು ತಡವಾಗಿಯಾದರೂ ತಪ್ಪನ್ನು ತಿದ್ದಿಕೊಂಡಿರುವುದರ ಲಕ್ಷಣವೆನ್ನಬಹುದು.

ಲೇಖನಗಳು ಹಾಗೂ ಪುಟಗಳ ಸಂಖ್ಯೆಯಲ್ಲಿ 'ಶುಭತಾಂಬೂಲ'ಕ್ಕಿಂತಲೂ 'ಶ್ರೀನಿವಾಸ ವೈಭವ' ಕಡಮೆಯಾಗಿದ್ದರೂ ಇಲ್ಲಿ ಅಡಕವಾಗಿರುವ ಬರಹಗಳ ತುರಿ, ಅವುಗಳು ನೀಡುವ ಸೊಗಸಿನಲ್ಲಿ ಕೊಂಚವೂ ಏರು ಪೇರಾಗಿಲ್ಲ. ಜೊತೆಗೆ ಈ ಸಂಕಲನದಲ್ಲಿ ಆರಿಸಿಕೊಂಡಿರುವ ಪ್ರಸಂಗಗಳೆಲ್ಲವೂ ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ ತಿರುಪತಿಯ ಶ್ರೀನಿವಾಸ ಮತ್ತು ಆತನ ಅನನ್ಯ ಆರಾಧಕರ ಸುತ್ತಲೇ ಹೆಣೆದುಕೊಂಡಿರುವಂತಹವು ಎನ್ನುವುದೇ ಎಲ್ಲ ಕೊರತೆಗಳನ್ನೂ ಮುಚ್ಚಿಹಾಕಿದೆ.

ತಿರುಮಲೆಯಲ್ಲಿ ನೆಲೆಸಿ ವಿಶ್ವದ ಮೂಲೆಮೂಲೆಗಳಿಂದ ಕೋಟ್ಯಂತರ ಭಕ್ತವೃಂದವನ್ನು ತನ್ನ ಸನ್ನಿಧಿಗೆ ಬರಮಾಡಿಕೊಳ್ಳುವ ವೆಂಕಟೇಶ್ವರಸ್ವಾಮಿಯ ದೈವಿಕ ಲೀಲೆಗಳನ್ನು ಕನ್ನಡದ ಓದುಗರೊಂದಿಗೆ ಹಂಚಿಕೊಳ್ಳುವ ಹಾಗೂ ಬಾಲಾಜಿಯ ಪರಮ ಭಕ್ತರಾದ ವಾಗ್ಗೇಯಕಾರ ಅನ್ನಮಾಚಾರ್ಯರ ಅಪಾರ ಸಾಹಿತ್ಯರಾಶಿಯ ರಮಣೀಯತೆಯ ಸಾರವನ್ನು ಉಣಬಡಿಸುವ 'ಶ್ರೀನಿವಾಸ ವೈಭವ' ಧಾರ್ಮಿಕ ಜಗತ್ತಿನ ಹಲವಾರು ಮಜಲುಗಳ ದರ್ಶನವನ್ನು ಮನೋಜ್ಞ ರೀತಿಯಲ್ಲಿ ಮಾಡಿಕೊಡುತ್ತದೆ.

ಭಕ್ತಿ ಪಂಥದಲ್ಲಿನ ಆದ್ಯ ತೆಲುಗುಕವಿ ಎನಿಸಿಕೊಂಡಿರುವ ಅನ್ನಮಯ್ಯನಿಗೆ ತನ್ನ ಆರಾಧ್ಯ ದೈವವಾದ ಶ್ರೀನಿವಾಸ - ಪದ್ಮಾವತಿ - ಅಲಮೇಲು ಮಂಗಮ್ಮನವರನ್ನು ಕಂಡಷ್ಟೂ ತಣಿಯದ ತೃಪ್ತಿ, ಬಣ್ಣಿಸಿದಷ್ಟೂ ತೀರದ ಚಪಲ. ಗೋವಿಂದನ ಲೀಲೆಗಳನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಆತ ತಿಳಿಸುವ ಬಗೆಯಂತೂ ಎಂದೂ ತೀರದ ಅಮೃತ ಸಾರವೇ ಸರಿ. ಈ ಸಾಹಿತ್ಯ ಸಿರಿಯ ಗಂಧವನ್ನು ಮೂಲಕ್ಕೆ ಕೊಂಚವೂ ಚ್ಯುತಿಬಾರದಂತೆ ಅನುವಾದಿಸುವಲ್ಲಿ ಗುಂಡೂರಾಯರು ಸಿದ್ಧಹಸ್ತರಾಗಿದ್ದರೆನ್ನಲು ಇಲ್ಲಿನ ಬರಹಗಳೇ ನಿದರ್ಶನವಾಗಿವೆ.

ತಿರುಮಲಾಧೀಶನ ಜೊತೆಯಲ್ಲಿ ಸಮಸ್ತ ಹಿಂದೂಗಳ ಶ್ರದ್ಧಾಬಿಂದುವಾದ ಮರ್ಯಾದಾ ಪುರುಷೋತ್ತಮ ಶ್ರೀರಾಮಚಂದ್ರನ ಕುರಿತೂ ಬೆಳಕಿಂಡಿ ನೀಡುವಲ್ಲಿ 'ಶ್ರೀನಿವಾಸ ವೈಭವ'ದಲ್ಲಿ ಬೆರಳೆಣಿಕೆಯಲ್ಲಿರುವ ಲೇಖನಗಳು ಯಶ ಕಂಡಿವೆ.

ಭಾರತೀಯ ಸಾಹಿತ್ಯದಲ್ಲಿ ಶೃಂಗಾರ ಹಾಗೂ ಪರಬ್ರಹ್ಮ ತತ್ವ (ಆಧ್ಯಾತ್ಮ ಸಾಹಿತ್ಯ ಪ್ರಕಾರದಲ್ಲಿ) ಗಳು ಆಧುನಿಕತೆಯ ಪ್ರಹಾರಕ್ಕೆ ಸಿಕ್ಕಿ ತನ್ನ ಪ್ರಭಾವವನ್ನು ಕಳೆದುಕೊಳ್ಳುತ್ತಿದ್ದರೂ, ಆಸಕ್ತ ಭಗವತ್ ಭಕ್ತರ ಕೃಪೆಯಿಂದಾಗಿ ಅಲ್ಲಲ್ಲಿ ಇನ್ನೂ ಈ ರೀತಿಯ ಸಾಹಿತ್ಯ ಸೃಷ್ಟಿಗೆ ಅವಕಾಶವಿದೆಯೆಂಬುದನ್ನು ಪರಿಣಾಮಕಾರಿಯಾಗಿ ನಿರೂಪಿಸಿದ್ದ ಬ.ನ. ಗುಂಡೂರಾಯರು ಇಂದು ನಮ್ಮೊಡನಿಲ್ಲವಾದರೂ ಅವರ ಬರವಣಿಗೆಯೆಲ್ಲವನ್ನು ಪುಸ್ತಕ ರೂಪದಲ್ಲಿ ದಾಖಲಿಡಿಸುವ ಹಂಬಲ ನಿಜವಾಗಿಯೂ ಸ್ತುತ್ಯರ್ಹಕಾರ್ಯವೇ ಸರಿ.

ದಕ್ಷಿಣ ಭಾರತದ ಅತಿ ಜನಪ್ರಿಯ ಆರಾಧ್ಯ ದೈವ ತಿರುಮಲ ಪ್ರಭುವಿನ ಸುಂದರ ಮುಖಪುಟ ಹೊಂದಿರುವ 'ಶ್ರೀನಿವಾಸ ವೈಭವ'ದಲ್ಲಿ ಮುದ್ರಾರಾಕ್ಷಸನ ಹಾವಳಿಯೂ ತೀರಾ ಸೀಮಿತ ಪ್ರಮಾಣದಲ್ಲಿರುವುದು, ಇದಕ್ಕೂ ಮಿಗಿಲಾಗಿ ಸರಾಗವಾದ ಓದಿಸಿಕೊಂಡು ಹೋಗುವ ಬ. ನ. ಗುಂಡೂರಾಯರ ಶೈಲಿಗಳು ಮುದನೀಡುವ ಸಂಗತಿಗಳಾಗಿವೆ.

ಶುಭತಾಂಬೂಲ ಮತ್ತು ಶ್ರೀನಿವಾಸ ವೈಭವ. ಕೃತಿಗಳ ಮೂಲಕ ಬ.ನ.ಗುಂ. ಸ್ಮಾರಕ ಗ್ರಂಥಮಾಲೆ ಇರಿಸಿರುವ ಹೆಜ್ಜೆ ಮುನ್ನಡೆದು ದಿವಂಗತ ಗುಂಡೂರಾಯರ ಪ್ರಕಟಿತ ಹಾಗೂ ಅಪ್ರಕಟಿತ ಲೇಖನಗಳಿಗೆಲ್ಲ ಪುಸ್ತಕರೂಪ ನೀಡಲಿ. ಅದಕ್ಕಿಂತ ಹೆಚ್ಚಾಗಿ ಸರಸ್ವತೀಪ್ರಿಯರಾದ ಓದುಗರು ಈ ಕೃತಿಗಳನ್ನು ಕೊಂಡು ಓದುವಂತಾಗಲಿ ಎಂದು ಹಾರೈಸುವೆ.

**--ಎಚ್. ಕೆ. ರಾಘವೇಂದ್ರರಾವ್.**

## ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ.ಓ. ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ. ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ತಿ.ತಿ.ದೇ. ತಿರುಪತಿ ಅಥವಾ ಎಕ್ಸಿಕ್ಯೂಟಿವ್ ಆಫೀಸರ್ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಡಿ.ಡಿ. ಯನ್ನು ಕಳುಹಿಸಬೇಕು. ಡಿ.ಡಿ. ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯೆ ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೇಕು.

**ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್,**

(ರಿಸೆಪ್ಷನ್) ತಿ.ತಿ.ದೇ. ತಿರುಪತಿ.

# ರಮಣ ಮಹರ್ಷಿ

---ಡಿ. ರಾಮಕೃಷ್ಣಾರಾವ್.

ಶ್ರೀ ರಮಣಮಹರ್ಷಿಗಳ ಪೂರ್ವಾಶ್ರಮದ ಹೆಸರು ವೆಂಕಟರಮಣ. ೧೮೭೯ ರಲ್ಲಿ ತಿರುಚ್ಚುಳಿಯಲ್ಲಿ ಇವರ ಜನನವಾಯಿತು. ಅವರ ತಂದೆ ಸುಂದರಂ. ತಾಯಿ ಅಳಗಮ್ಮಾಳ್. ಈ ದಂಪತಿಗಳ ಮೂರು ಜನ ಗಂಡು ಮಕ್ಕಳಲ್ಲಿ ವೆಂಕಟರಮಣ ಮಧ್ಯದವನು.

ವೆಂಕಟರಮಣ ತನ್ನ ಹದಿನಾರನೆಯ ವಯಸ್ಸಿನವರಿಗೆ ಎಲ್ಲ ಬಾಲಕರಂತೆಯೇ ಇದ್ದ. ಶಾಲೆಗೆ ಹೋಗುತ್ತಿದ್ದರೂ ಅವನಿಗೆ ಓದಿಗಿಂತ ಆಟದ ಕಡೆಗೆ ಹೆಚ್ಚು ಗಮನ. ಈಜುವುದು, ಕುಸ್ತಿ ಮಾಡುವುದು ಇಂಥ ಬಿರುಸಾದ ವ್ಯಾಯಾಮಗಳೆಂದರೆ ಅವನಿಗೆ ಪ್ರಿಯ. ಮುಂದೆ ಅಪೂರ್ವ ಮಹರ್ಷಿಯಾಗುವವರಲ್ಲಿ ನಾವು ಕಲ್ಪಿಸಿಕೊಳ್ಳಬಹುದಾದ ಯಾವ ಪೂರ್ವ ಸೂಚನೆಗಳೂ ಅವನ ಬಾಲ್ಯಜೀವನದಲ್ಲಿ ಕಂಡು ಬರಲಿಲ್ಲ.

ವೆಂಕಟರಮಣನ ೧೬ ನೆಯ ವಯಸ್ಸಿನಲ್ಲಿ ಇದ್ದಕ್ಕಿದ್ದಂತೆ ಒಂದು ಪರಿಣಾಮಕಾರಿಯಾದ ಘಟನೆ ಜರುಗಿತು. ಮನೆಗೆ ಯಾರೋ ನೆಂಟರು ಬಂದರು. ಎಲ್ಲಿಂದ ಬರುತ್ತಿದ್ದೀರಿ ಎಂದು ಕೇಳಿದಾಗ ಅವರು ಅರುಣಾಚಲದಿಂದ ಎಂದರು. ಅರುಣಾಚಲ ಎಂಬ ಪದವನ್ನು ಕೇಳುತ್ತಿದ್ದಂತೆಯೇ ಹತ್ತಿರ ನಿಂತಿದ್ದ ವೆಂಕಟರಮಣ ರೋಮಾಂಚಿತನಾದ, ಅವನ ಹೃದಯದಲ್ಲಿ ಆನಂದದ ಚಿಲುಮೆ ಉಕ್ಕಿ ಹರಿಯಿತು, ಜಡವಾಗಿದ್ದ ಬಾಳಿನ ಮೇಲೆ ಏನೋ ಸಮ್ಮೋಹನ ಕವಿದಂತಾಯಿತು. ಆವರಿಗೆ ಅವನು ಅರುಣಾಚಲದ ಹೆಸರನ್ನೇ ಕೇಳಿರಲಿಲ್ಲ. ಆದರೂ ಅದು ಹೃದಯಕ್ಕೆ ಬಹಳ ಆಪ್ತವಾಗಿ ತೋರಿತು. ಜನ್ಮ ಜನ್ಮಾಂತರದಿಂದ ತನಗೆ ಪರಿಚಯವಾದ ಸಖ್ಯವೊಂದು ಸೋಕಿದಂತಾಯಿತು.

ವೆಂಕಟರಮಣನಿಗೆ ಆಗ ಹದಿನಾರುವರ್ಷ. ಒಂದು ದಿನ ಒಬ್ಬನೇ ಕೋಣೆಯಲ್ಲಿ ಕುಳಿತಿದ್ದಾನೆ. ಹಟಾತ್ತನೆ ಭೀಕರ ಭಯವೊಂದು ಅವನನ್ನು ಕವಿಯಿತು. "ಇನ್ನು ಹತ್ತಾರು ನಿಮಿಷಗಳಲ್ಲೇ ನಾನು ಸತ್ತು ಹೋಗಿಬಿಡುತ್ತೇನೆ; ಇವು ನನ್ನ ಕೊನೆ ನಿಮಿಷಗಳು" ಅನ್ನಿಸಿಬಿಟ್ಟಿತು. ಕೂಡಲೆ ಆತನು ಅಂಗಾತವಾಗಿ ಮಲಗಿದ. ಸಾಯುವುದೇನಿದ್ದರೂ ಈ ದೇಹ ಮಾತ್ರ ನಾನಲ್ಲ - ಎಂದು ಯೋಚಿಸತೊಡಗಿದ. ಅವನ ಶ್ವಾಸನಿಂತಿತು. ದೇಹ ಜಡವಾಯಿತು. ಇದೆಲ್ಲ ಆಗುತ್ತಿರುವುದರ ಅರಿವೂ ಅವನಿಗಿತ್ತು. ಕಡೆಗೆ ದೇಹ ತೀರಿಹೋಯಿತೆಂದೂ, ತನ್ನ ಪ್ರಜ್ಞೆ ದೇಹದಿಂದ ಮುಕ್ತವಾಗಿ ಸ್ವತಂತ್ರವಾಗಿ ಉಳಿದಿದೆ ಎಂದೂ ಅನಿಸಿತು. ಶರೀರವೇ ದೇರೆ. ನಾನು ಎಂಬ ಪ್ರಜ್ಞೆಯೇ ದೇರೆ ಎಂಬ ಅರಿವು ಖಚಿತವಾಗಿ ಹೋಯಿತು. ಈ ಸ್ಥಿತಿ. ಅರ್ಧಗಂಟೆ ಇದ್ದು ಅನಂತರ ಬಿಟ್ಟುಹೋಯಿತು. ಆದರೆ ವೆಂಕಟರಮಣನ ಪಾಲಿಗೆ ಅದೊಂದು ಪೂರ್ವ ಜನ್ಮವಾಯಿತು. ಹುಡುಗ ಮಧುರೆಯ ಮೀನಾಕ್ಷಿದೇವಾಲಯಕ್ಕೆ ಹೋಗಿ ದೇವಿಯ ಮುಂದೆ ಗಂಟೆಗಟ್ಟಲೆ ಪ್ರಜ್ಞಾಹೀನನಂತೆ ಧ್ಯಾನದಲ್ಲಿ ಮಗ್ನನಾಗಿಬಿಡುತ್ತಿದ್ದ. ಯಾವುದೋ ಆನಂದದ ಧಾರೆಯಲ್ಲಿ ಸೇರಿಹೋಗುತ್ತಿದ್ದ.



ಕಡೆಗೆ ಒಂದು ದಿನ ಅಣ್ಣ ಯಾತಕ್ಕಾಗಿಯೋ ಕೊಟ್ಟ ಅಯಿದು ರೂಪಾಯಿಗಳಲ್ಲಿ ಮೂರನ್ನು ಮಾತ್ರ ತೆಗೆದುಕೊಂಡು ವೆಂಕಟರಮಣ ಅರುಣಾಚಲದ ಹಾದಿ ಕೇಳಿಕೊಂಡು ರೈಲು ಹತ್ತಿಬಿಟ್ಟ. ಅಲ್ಲಿ ದೆಟ್ಟದ ಬುಡದಲ್ಲಿರುವ ಅರುಣಾಚಲೇಶ್ವರನ ಗರ್ಭಗುಡಿಗೆ ನೇರವಾಗಿ ಹೋಗಿ ಅವನ ಕರೆಯಂತೆ ತಾನುಬಂದಿರುವುದಾಗಿ ನಿವೇದಿಸಿಕೊಂಡ; ಒಂದು ಕೌಪೀನ ಬಿಟ್ಟು ಮೈಮೇಲೆ ಉಳಿದೆಲ್ಲ ತೆಗೆದೆಸೆದ.ಯಾರೋ ಕ್ಷೌರಿಕ ಹುಡುಕುತ್ತಿದ್ದವನಂತೆ ಬಂದು ಅವನ ತಲೆ ಕೂದಲು ತೆಗೆದ. ಆಗ ತಾನೆ ಸುರಿದ ಮಳೆಯಲ್ಲಿ ಮೈನೆನೆದು ಸ್ನಾನವೂ ಆಗಿಹೋಯಿತು. ಆ ಭಾರಿ ದೇವಾಲಯದ ಯಾವುದೋ ಒಂದು ಮೂಲೆಯಲ್ಲಿ ಕುಳಿತು

ಹುಡುಗ ಕೂಡಲೇ ಧ್ಯಾನದಲ್ಲಿ ಮುಳುಗಿಹೋದ. ಮುಂದಿನ ಹಲವು ವರ್ಷಗಳು ಘೋರ ತಪಸ್ಸಿನ ವರ್ಷಗಳು. ಜನರು ಪ್ರವೇಶಿಸಲು ಹೆದರುವ ಕ್ರಿಮಿಕೀಟಗಳಿಂದ ತುಂಬಿದ ಪಾತಾಳಲಿಂಗಂ ಎಂಬ ಕತ್ತಲೆ ಗುಹೆಯಲ್ಲಿ ವೆಂಕಟರಮಣ ಬಾಹ್ಯಲೋಕದ, ಬಾಹ್ಯಶರೀರದಪರಿವೆಯಿಲ್ಲದೆ ಆತ್ಮಾನಂದದಲ್ಲಿ ಮುಳುಗಿ ಕೂತಿದ್ದ, ಎರಡು ಮೂರು ದಿನಗಳಿಗೊಮ್ಮೆ ಎಚ್ಚರವಾದಾಗ ಯಾರಾದರೂ ಏನಾದರೂ ಎದುರಿಗಿಟ್ಟಿದ್ದರೆ ಅವರಲ್ಲಿ ಒಂದು ಹಿಡಿಯಷ್ಟನ್ನುತಿಂದು ಮತ್ತೆ ಧ್ಯಾನದಲ್ಲಿ ಮುಳುಗುತ್ತಿದ್ದ. ಅಲ್ಲಿದ್ದ ಸ್ಥಾನಿಕ ಸಾಧುಗಳಾದ ಶೇಷಾದ್ರಿ ಅಯ್ಯರ್‌ರಂಥವರು ದೂರದಿಂದಲೇ ಹುಡುಗನನ್ನು ಗಮನಿಸುತ್ತಾ ಅವನ ರಕ್ಷಣೆಯನ್ನು ಮಾಡುತ್ತಿದ್ದರು.

ಕೆಲವು ವರ್ಷಗಳ ಅನಂತರ ಈ ಸುದ್ದಿ ಊರಿಗೆ ತಲುಪಿ, ವೆಂಕಟರಮಣನ ಚಿಕ್ಕಪ್ಪ, ತಾಯಿ, ಅಣ್ಣ ಬಂದು ಮನೆಗೆ ಬರಬೇಕೆಂದು ಒತ್ತಾಯಗೊಳಿಸಿ ಹೋದರು. ಆದರೆ ವೆಂಕಟರಮಣ ಮೌನಿಯಾಗಿ ಬಿಟ್ಟಿದ್ದ. ಕಡೆಗೊಂದು ದಿನ ಒಂದು ಕಾಗದದ ಮೇಲೆ "ಈಗ ಆಗಿರುವುದೆಲ್ಲ ಪರಮಾತ್ಮನ ಇಚ್ಛೆಗೆ ಅನುಗುಣವಾಗಿದೆ. ಇದಕ್ಕೆ ಯಾರೂ ಚಿಂತಿಸಬೇಕಾಗಿಲ್ಲ" ಎಂದು ಬರೆದು ಬಿಟ್ಟ. ನಿರಾಶರಾದ ತಾಯಿ, ಅಣ್ಣ ಬರಿಗೈಯಲ್ಲಿ ಊರಿಗೆ ವಾಪಸ್ಸು ಹೋಗಬೇಕಾಯಿತು.

ಮುಂದೆ ರಮಣರು ಬೆಟ್ಟದ ಮೇಲಿನ ವಿರೂಪಾಕ್ಷ ಗುಹೆಯಲ್ಲಿ ನೆಲೆನಿಂತರು. ಅವರನ್ನು ಅರಸಿಕೊಂಡು ಅನೇಕ ಜಿಜ್ಞಾಸುಗಳು ಮುಮುಕ್ಷುಗಳು ಅವರಲ್ಲಿ ಬರತೊಡಗಿದರು. ಆತ್ಮ ಸಾಕ್ಷಾತ್ಕಾರದ ದಾರಿಯಲ್ಲಿ ಅವರ ಮಾರ್ಗದರ್ಶನವನ್ನು ಮೊದಲು ಪಡೆದವರು ಶೇಷಯ್ಯ ಮತ್ತು ಶಿವಪ್ರಕಾಶಂಪಿಳ್ಳೆ ಎಂಬ ಇಬ್ಬರು ಸಾಧಕರು. ಅವರು ರಮಣರನ್ನು ಕುರಿತು ಆತ್ಮಸ್ವರೂಪದರ್ಶನದ ವಿಷಯದಲ್ಲಿ ಆಗಾಗ ಕೇಳಿದ ಪ್ರಶ್ನೆಗಳಿಗೆ ರಮಣರು ಕಾಗದದ ತುಂಡುಗಳ ಮೇಲೆ ಉತ್ತರ ಬರೆದಿಡುತ್ತಿದ್ದರು. ಆ ಸಾಧಕರು ಅವನ್ನೆಲ್ಲ ಕ್ರೋಢೀಕರಿಸಿಕೊಂಡು ಕೊನೆಗೆ ಒಂದು ಪುಸ್ತಕ ರೂಪದಲ್ಲಿ ಪ್ರಕಟಿಸಿದರು. ನಾಲ್ಕೇ ಮಾತುಗಳಲ್ಲಿ ಅದೆಲ್ಲದರ ಸಾರ ಹೀಗಿದೆ :

ತನ್ನನ್ನು ತಾನು ತಿಳಿಯುವುದೇ ಎಲ್ಲಕ್ಕಿಂತ ಹಿರಿಯಸಾಧನೆ. ನಾನು ಯಾರು ಎಂಬ ಸಂಶೋಧನೆಯನ್ನು ನಮ್ಮೊಳಗೆ ನಡೆಸುತ್ತಾ ಹೋಗಬೇಕು. ಅದೇ ತಪಸ್ಸು. ಆತ್ಮದ ಸ್ವರೂಪದರ್ಶನವಾಗಬೇಕಾದರೆ ಈ ಮಿಥ್ಯಾರೂಪದ "ನಾನು" ಕಳಚಿಬೀಳಬೇಕು. ನಮ್ಮ ವಿಚಾರಗಳು ಆಲೋಚನೆಗಳು ನಮ್ಮ ಶಕ್ತಿಗಳ ಹಾಗೆ. ಅವು ನಮ್ಮನ್ನು ನಮ್ಮ ನಿಜ ನೆಲೆಯಿಂದ ಹೊರಕ್ಕೆ ಒಯ್ಯುತ್ತವೆ. ಅದ್ದರಿಂದ ಆಲೋಚನೆ ಆರಂಭವಾಗುವ ನೆಲೆಯನ್ನೇ ಗಮನಿಸುತ್ತ, ಅದು ಹುಟ್ಟಿದಂತೆಲ್ಲ ಮತ್ತೆ ಮತ್ತೆ ಅದನ್ನು ತುಂಡರಿಸುತ್ತಲೇ ಇರಬೇಕು. ಇಂಥ ನಿರಂತರ ಸಾಧನೆಯಿಂದಾಗಿ ಕಡೆಗೊಮ್ಮೆ ಆಲೋಚನೆಯ ಕ್ರಿಯೆ ಸ್ಥಗಿತವಾಗಿ ಬಿಡುತ್ತದೆ. ಮಿಥ್ಯೆಯಾದ ಮನಸ್ಸು ನಾಶವಾಗಿ "ಸುಳ್ಳು ನಾನು" ಕಳಚಿಬೀಳುತ್ತದೆ. ಆಗ ನಿಜವಾದ ನಾನು ಎಂದರೆ ಆತ್ಮದ ಅಸ್ತಿತ್ವದ ಅರಿವಾಗುತ್ತದೆ. ಆ ಅರಿವು ಆನಂದಮಯವಾದದ್ದು. ಆ ಬೋಧೆ ಉಂಟಾದಾಗ ಆತ್ಮವೊಂದೇ ಸತ್ಯ ಎಂದೂ ಎಲ್ಲಾ ಚರಾಚರ ವಸ್ತುಗಳಲ್ಲಿ ವ್ಯಾಪಿಸಿರುವುದೂ ಅದೇ ಎಂದೂ ತಿಳಿಯುತ್ತದೆ. ಹೀಗೆ ಆತ್ಮಭಾವ ವಿಶ್ವಾತ್ಮಭಾವದಲ್ಲಿ ಪರ್ಯವಸಾನವಾಗುತ್ತದೆ.

ರಮಣ ಮಹರ್ಷಿಗಳ ಪೂರ್ವಾಶ್ರಮದ ಹೆಸರು ವೆಂಕಟ್ರಮಣ ಎಂದೂ, ಅವರನ್ನು ರಮಣ ಮಹರ್ಷಿಯೆಂದು ಕರೆದವರು, ಕಾವ್ಯಕಂಠ ಗಣಪತಿ ಶಾಸ್ತ್ರಿಯೆಂಬುವರು. ಅವರು ಒಬ್ಬ ಧೀಮಂತ ಸಾಧಕ. ಮಹಾ ಮೇಧಾವಿಯೂ, ಕಾವ್ಯರಚನೆಯಲ್ಲಿ ಪರಿಣಿತರು, ಅಧ್ಯಾತ್ಮಸಾದಕರೂ ಮತ್ತು ದೈವದರ್ಶನಕ್ಕಾಗಿ ಅಹೋರಾತ್ರಿ ಸಾಧನೆ ನಡೆಸಿದವರು. ಅವರು ರಮಣರಲ್ಲಿಗೆ ಬಂದು ಅವರ ಆಸರೆ ಪಡೆದು ತಮ್ಮ ಅಭೀಪ್ಸೆಯ ಮಾರ್ಗದಲ್ಲಿ ತೀವ್ರವಾಗಿ ಮುನ್ನಡೆದರು. ಪಾಲ್‌ಬ್ರಂಟನ್ ಎಂಬ ಪಾಶ್ಚಾತ್ಯ ಪತ್ರಿಕೋದ್ಯಮಿ ಭಾರತ ಯೋಗಿಗಳನ್ನು ಹೊಕ್ಕು ನೋಡುವ ಕುತೂಹಲದಿಂದ ಭಾರತಕ್ಕೆ ಬಂದು ಹಿಮಾಲಯಾದಿಂದ ಕನ್ಯಾಕುಮಾರಿಯವರೆವಿಗೂ ಹೆಸರಾಂತ ಹಲವು ಸಾಧಕರನ್ನು ಕಂಡು ಅವರನ್ನು ಒಪ್ಪದೆ ಅವೆಲ್ಲ ಅಪ್ರಯೋಜಕವೆಂದು ತಿರಸ್ಕರಿಸಿ, ರಮಣ ಮಹರ್ಷಿಗಳಿಂದ ಪಡೆದ ಅನುಭವದಿಂದ ಪೂರ್ತಿ ಪರಿವರ್ತಿತನಾಗಿ ಹೋದ. ಅವರು ಬರೆದ "A search into secret India" ಎಂಬ ಗ್ರಂಥದಲ್ಲಿ ರಮಣಮಹರ್ಷಿ ಭಾರತೀಯ ಋಷಿ ಪರಂಪರೆಯ ಒಂದು ಅಪೂರ್ವರತ್ನ ಎಂದು ವರ್ಣಿಸಿದ್ದಾನೆ.

ರಮಣ ಮಹರ್ಷಿಗಳ ಪ್ರಸಿದ್ಧಿ ಎಲ್ಲಕಡೆ ಹರಡಿತು. ಅವರನ್ನು ಕಾಣಲು ಅನೇಕ ಪಶ್ಚಾತ್ಯ ಜಿಜ್ಞಾಸುಗಳು ಭಾರತಕ್ಕೆ ಬಂದರು. ಅವರು ರಮಣರ ಬಗ್ಗೆ ಬರಹಗಳನ್ನು ಪ್ರಕಟಿಸಿದ್ದಾರೆ. ಗಣಪತಿಮುನಿ, ಕಪಾಲಿಶಾಸ್ತ್ರಿ, ಎಂ. ಎಸ್. ಕಾಮತ್, ನರಸಿಂಹಸ್ವಾಮಿ ಮೊದಲಾದ ಅನೇಕ ಮೇಧಾವಿಗಳು ರಮಣರ ಬಗ್ಗೆ ಗ್ರಂಥಗಳನ್ನು ಹೊರತಂದಿದ್ದಾರೆ. ರಮಣರೇ ಅರುಣಾಚಲನನ್ನು ಕುರಿತು ಬರೆದ ಹಲವಾರು ಭಕ್ತಿಗೀತೆಗಳಿವೆ. ರಮಣರ ಭಕ್ತಿಗೀತೆಗಳೆಲ್ಲ

## ಸಪ್ತಗಿರಿ ಬರಹಗಾರರಿಗೆ ಸೂಚನೆ :

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಪುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ರ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ ಕಿಶೋರಜಗತ್ ಮೋದಲಾವ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು**

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭

ಚಿತ್ತೂರು ಜಿಲ್ಲೆ, ಆಂ. ಪ್ರ.

ಅತ್ಯಂತ ಶ್ರೇಷ್ಠವಾದವು "ಅಕ್ಷರ ಮಣಿಮಾಲೆ" ಒಂದು ಸ್ತೋತ್ರಮಾಲಿಕೆ.

ಡಾ. ರಾಜೇಂದ್ರಪ್ರಸಾದ್, ಡಾ. ರಾಧಾಕೃಷ್ಣನ್,ಜಮುನಾಲಾಲ್ ಬಜಾಜ್, ಸಿ.ಪಿ. ರಾಮಸ್ವಾಮಿ ಅಯ್ಯರ್, ಪಾಲ್ ಬ್ರಂಟನ್‌ರಂತಹ ಅನೇಕ ಮೇಧಾವಿಗಳು ರಮಣರನ್ನು ಕಂಡು ಗೌರವ ಸಮರ್ಪಿಸಿಹೋದವರು. ಸಹಸ್ರಾರು ಜನ ಅರುಣಾಚಲಕ್ಕೆ ಬಂದು ಅವರುನ್ನು ಭಗವಾನರೆಂದು ಆರಾಧಿಸಿದರು. ರಮಣರು ಒಬ್ಬ ಸಾಮಾನ್ಯವ್ಯಕ್ತಿಯಂತೆ ಕಾಣಿಸಿಕೊಳ್ಳುತ್ತಿದ್ದರು. ಅವರು ಎಂದೂ ಪೀಠ ಹತ್ತಿಕೂರಲಿಲ್ಲ. ಕೊರಳಿಗೆ ಮಾಲೆಯಾಗಲಿ, ಆರಾಧನೆ, ಪಾದಪೂಜೆ ಮಾಡಿಸಿಕೊಳ್ಳಲಿಕ್ಕೂ ಅವಕಾಶಕೊಡುತ್ತಿರಲಿಲ್ಲ. ಅವರು ಎಂದೂ ಹಣವನ್ನು ಸ್ವೀಕಾರಮಾಡುತ್ತಿರಲಿಲ್ಲ. ಅಡಿಗೆ ಮನೆಯಲ್ಲಿ ತರಕಾರಿ ಹಚ್ಚುವುದೊ, ನಾಯಿ, ಹಸುಗಳನ್ನು ಪ್ರಾಣಿದೇಹದಲ್ಲಿರುವ ಮಾನವ ಚೇತನರೆಂಬಂತೆ ಮಾತನಾಡಿಸುತ್ತಲೋ, ಬಂದವರ ಊಟ ಉಪಚಾರಗಳ ಬಗ್ಗೆ ಕಾಳಜಿ ವಹಿಸುತ್ತಿದ್ದರು. ಇದೇ ರೀತಿ ರಮಣರನ್ನು ಕಂಡಾಗ ಇವರು ತೀರ ಸಾಮಾನ್ಯರಂತೆ ಇದ್ದಾರಲ್ಲ ಎಂದು ಮೇಧಾವಿಗಳಿಗೆ ಪಂಡಿತರಿಗೆ ಅನ್ನಿಸುತ್ತಿತ್ತು . ಅವರು ಮೌನವಾಗಿ ಕುಳಿತಿರುವಾಗಲೂ ಅವರ ವ್ಯಕ್ತಿತ್ವದಿಂದ ಹೊಮ್ಮುತ್ತಿದ್ದ ಸುಖಕರವಾದ ಅಂತಃಶ್ಚಾಲಕ ಶಕ್ತಿಯ ಮಹಿಮೆ ಅವರಲ್ಲಿಗೆ ಬಂದ ಎಲ್ಲ ಸಾಧಕರ ಅರಿವಿಗೂ ಬಂದದ್ದಿದೆ. ಅವರು ಪ್ರಾಣಿಗಳ ಬಗ್ಗೆ ನಡೆಸಿಕೊಳ್ಳುತ್ತಿದ್ದ ಕ್ರಮ, ಗಣಪತಿ ಶಾಸ್ತ್ರಿ ಮತ್ತು ಎಚ್ಚಮ್ಮಾಳ್ ರಂಥ ಭಕ್ತರಿಗೆ ಆದ, ನಿಗೂಢದರ್ಶನಗಳ ಬಗ್ಗೆ ಅವರು ನೀಡಿದ ವ್ಯಾಖ್ಯಾನ ಮೊದಲಾದವು ರಮಣರನ್ನು ಉಳಿದ ಎಲ್ಲಾ ಸಿದ್ಧ ಸಾಧಕರಿಂದ ಬೇರ್ಪಡಿಸುವಂಥವು.

೧೯೫೦ ರಲ್ಲಿ ರಮಣರು ದೇಹನ್ಯಾಸಮಾಡಿದರು. ಅವರು ಕ್ಯಾನ್ಸರ್ ಸಂಬಂಧದಲ್ಲಿ ತಮಗೆ ನಡೆಸಲಾದ ಶಸ್ತ್ರಚಿಕಿತ್ಸೆಯ ಸಂದರ್ಭದಲ್ಲೂ ಅವರು ಪ್ರಸನ್ನರು, ಶಾಂತರೂ ಆಗಿದ್ದರು. ಯಾವ ವೇದನೆಯ ಅರಿವು ಅವರ ಮುಖದಲ್ಲಿ ಕಾಣುತ್ತಿರಲಿಲ್ಲ.

ಒಂದು ಮಹಾಚೈತನ್ಯ ಈ ಜಗತ್ತನ್ನೆಲ್ಲ ವ್ಯಾಪಿಸಿದೆ. ನಾನು ಆ ಚೈತನ್ಯವೇ ಆಗಿದ್ದೇನೆ. ಎಂಬ ಅದ್ವೈತ ಸಿದ್ಧಾಂತವನ್ನು ಆಚಾರ್ಯ ಶಂಕರರು ಸಾವಿರಾರು ವರ್ಷಗಳ ಹಿಂದೆ ಬೋಧಿಸಿದರು. ಅದನ್ನು ಅತ್ಯಂತ ವೈಜ್ಞಾನಿಕವಾಗಿ, ಸರಳವಾಗಿ ಸ್ವಂತಬಾಳುವೆಯ ನಿದರ್ಶನದೊಂದಿಗೆ ಈ ಶತಮಾನದಲ್ಲಿ ಮತ್ತೊಮ್ಮೆ ಅಪೂರ್ವವೆಂಬಂತೆ ನಿರೂಪಿಸಿದವರು ಭಗವಾನ್ ರಮಣಮಹರ್ಷಿಗಳು.

ಅವರ ಅಪೂರ್ವ ಜೀವನದ... ಶ್ರೀಲಕ್ಷ್ಮಿ ನಾಯಿ, ನವಿಲು, ಗುಬ್ಬಿ, ಪಾರಿವಾಳ, ... ಗಳಿಂತ್ತ ಅವರು ತೋರುತ್ತಿದ್ದ ವಾತ್ಸಲ್ಯ ಪ್ರೀತಿ ಇವು ಬೆರಗುಗೊಳಿಸುವಂತಹವು. ರಾಜ್ಯ ಸಂಸ್ಥಾನಗಳ ಮಹಾರಾಜ, ರಾಣಿಯರು ಬೇಟಿ ಇತ್ತಾಗಲೂ ಕೇವಲ ಕೌಪೀನಧಾರಿಯಾಗಿ ಅಡಿಗೆ ಶಾಲೆಯಲ್ಲಿ ಬೆಳಗಿನ ಚಳಿಯಲ್ಲಿ ತರಕಾರಿ ಹಚ್ಚುತ್ತಾ ಹಸ್ತಕಸ ಹಾಕು ಹೆಚ್ಚುತ್ತ ಈ ವೈರಾಗ್ಯ ಚಕ್ರವರ್ತಿ ಕೂತಿರುತ್ತಿದ್ದರು. ಅವರ ಬಳಿಗೆ ಧಾವಿಸಿ, ದೇಶ ವಿದೇಶಗಳಿಂದ ಬಂದ ಸಚಿತ್ರೇಷ್ಠರು, ರಾಜಮಹಾರಾಜರು, ರಾಷ್ಟ್ರನಾಯಕರು ಕೇವಲ ಸಾನ್ನಿಧ್ಯ ಮೌನದ ಮಹಾಸಾನ್ನಿಧ್ಯದಿಂದಲೆ ಅಪೂರ್ವಶಾಂತಿಯನ್ನು ಪಡೆಯುತ್ತಿದ್ದರು.

ಈ ರೀತಿಯಾಗಿ ಆತ್ಮಸಾಧನೆಗಳಿಸಿದ್ದನ್ನು ಕೇಳಿ, ಕಂಡು ಸಂತೋಷಿಸಿ ಅವರ ತಾಯಿ ಚಿಕ್ಕಪ್ಪ ತಿರುವಣ್ಣಾಮಲೆಗೆ ಬಂದು ರಮಣರನ್ನು ಮನೆಗೆ ಕರೆದರು. ಬೇಕಾದ ಎಲ್ಲಾ ಸೌಲಭ್ಯಗಳನ್ನು ವ್ಯವಸ್ಥೆ ಮಾಡುವುದಾಗಿ ಹೇಳಿದರು. ಮತ್ತು ಭಕ್ತರೆಲ್ಲರೂ ಒಟ್ಟಾಗಿ ಏಕಕಂಠದಿಂದ ಒಂದು ಉತ್ತರಕ್ಕಾಗಿ ಪ್ರಾರ್ಥಿಸಿದರು. ಆಗ ರಮಣರು ಒಂದು ಕಾಗದದ ಚೂರಿನ ಮೇಲೆ ಬರೆದರು "ಜೀವಕೋಟಿಯ ಕರ್ಮಬರಹವು ಎಂದೋ ಬರೆಯಲ್ಪಟ್ಟಿವೆ. ನಿಯಮಕ್ಕನುಸಾರವಾಗಿ ಜೀವರಾಶಿಯ ಬದುಕು ಸಾಗಿದೆ. ಆಗಬಾರದ್ದು ಎಂದೂ ಆಗುವುದಿಲ್ಲ. ಆಗುವುದು ಏನಿದೆಯೋ ಅದು ಆಗಿಯೇ ತೀರುತ್ತದೆ. ಇದು ಸತ್ಯ". ಬಂದ ದಾರಿಗೆ ಸುಂಕವಿಲ್ಲವೆಂದು ತಾಯಿ, ಚಿಕ್ಕಪ್ಪನು ಹಿಂತಿರುಗಿದರು.

ರಮಣರ ಉಪದೇಶವು ಸುಲಭವೂ ಸರಳವೂ ಆಗಿದೆ. ಅದು ಅದ್ವೈತ ವೇದಾಂತದ ಒಂದು ಮಾರ್ಗ. "ನೀನು ನಿನ್ನನ್ನು ಅರಿತುಕೋ". ಅವರ ಸನ್ನಿಧಿಯಲ್ಲಿ ಉಳಿದರೆ ಸಾಕು. ಸಾಧಕನಿಗೆ ಅಮೂಲ್ಯವಾದ ಸಹಾಯ ದೊರಕುತ್ತಿತ್ತು. ರಮಣರ ಭಕ್ತವೃಂದ ನಿಧಾನವಾಗಿ ಬೆಳೆಯುತ್ತ ಹೋಯಿತು. ಅವರ ಕೀರ್ತಿ ಪ್ರತಿಷ್ಠೆಗಳು ಬೆಳೆಯುತ್ತಾ ಹೋದವು. ಅವರ ಆಶ್ರಮಕ್ಕೆ ಬಂದು ಹೋದವರಲ್ಲಿ ಅನೇಕ ರಾಷ್ಟ್ರೀಯನಾಯಕರು, ವಿದೇಶೀಯ ಭಕ್ತರು ಸೇರಿದ್ದಾರೆ. ಅದರನ್ನು ಕುರಿತು ಹಲವು ಗ್ರಂಥಗಳು ಪ್ರಕಟವಾಗಿವೆ. Samaratmam ಎಂಬ ವಿಖ್ಯಾತ ಲೇಖಕನು ಸ್ವಾಮಿಯ ಭಕ್ತನಾಗಿದ್ದ. ಒಮ್ಮೆ ಡಾ. ರಾಜೇಂದ್ರ ಪ್ರಸಾದರು ಆಶ್ರಮಕ್ಕೆ ಬಂದಿದ್ದರು. ಅಲ್ಲಿ ಅವರು ಅಯಿದಾರು ದಿನಗಳಿದ್ದರು. ಹೊರಡುವಾಗ ರಮಣರನ್ನು ಕೇಳಿದರು. "ಮಹಾತ್ಮಜೀ ಅವರು ನನ್ನ ಇಲ್ಲಿಗೆ ಕಳಿಹಿಸಿದ್ದಾರೆ. ಅವರಿಗೆ ತಮ್ಮ ಪರವಾಗಿ ತಲಪಿಸುವ ಸಂದೇಶವೇನಾದರು ಇದೆಯೇ ತಿಳಿಸಿ" ಎಂದರು ಅದಕ್ಕೆ ಮಹರ್ಷಿಗಳ ಉತ್ತರ ಹೀಗಿತ್ತು "ಪರಸ್ಪರರಲ್ಲಿ ಹೃದಯಗಳೇ ಮಾತನಾಡುತ್ತಿರುವಾಗ ಯಾವ ಸಂದೇಶದ ಅಗತ್ಯ ಇದೆ? ಇಲ್ಲಿ ಪ್ರಸ್ತುತನಾಗಿರುವ ಶಕ್ತಿಯೇ ಅಲ್ಲಿಯೂ ಇದೆ". ಮಹಾತ್ಮರ ವಾಣಿಯೆಲ್ಲವೂ ಒಂದೇ ಅಲ್ಲವೆ? ಮಹರ್ಷಿಗಳ ಮಾತು ಇದನ್ನು ಪ್ರಸ್ಫುಟೀಕರಿಸುತ್ತದೆ-

ಮಹರ್ಷಿಗಳಾದರೇನು? ಸಾವು ಯಾರನ್ನು ಬಿಡುತ್ತದೆ? ೧೯೪೯ ನೇ ವರ್ಷದ ಕೊನೆ ಭಾಗದಲ್ಲಿ ಅವರ ಎಡಮೊಣಕೈ ಮೇಲೆ ಕಡಲೆ ಕಾಳಿನ ಗಾತ್ರದ ಒಂದು ಗಂಟು ಕಾಣಿಸಿಕೊಂಡಿತು. ಅದು ನಿಧಾನವಾಗಿ ಬೆಳೆಯಲಾರಂಭಿಸಿತು. ನೋವು ಕೊಡಲು ಪ್ರಾರಂಭಿಸಿತು. ಶಸ್ತ್ರಕ್ರಿಯೆ ಮಾಡಲಾಯಿತು. ತಜ್ಞರಾದ ವೈದ್ಯರೆಲ್ಲರೂ ನಾನು ಮುಂದು ತಾನು ಮುಂದೆಂದು ಸೇವೆಗಾಗಿ ಬಂದರು. ರಮಣರು ಮಾತ್ರ ಔಷದೋಪಚಾರಗಳ ಬಗ್ಗೆ ಕೇಳಿಸ್ಲಿಲ್ಲ. ಹೇಗಾಗುವುದಿದೆಯೋ ಹಾಗಾಗಲಿ ಎಂದು ದೃಢವಾಗಿ ಶಿಷ್ಯವೃಂದಕ್ಕೆ ಹೇಳಿದರು. ದಿನ ದಿನಕ್ಕೂ ಅವರ ಆರೋಗ್ಯ ಕೆಡುತ್ತ ಬಂತು. ಅವರು ೭೧ನೇ ವರ್ಷದ ಜನ್ಮದಿನೋತ್ಸವ ಸಮಾರಂಭಕ್ಕೆ ಎಲ್ಲವು ಸಿದ್ಧತೆಗಳು ಆಗಿದ್ದವು ರಮಣ ಮಹರ್ಷಿಗಳ ಆರೋಗ್ಯಕ್ಕಾಗಿ ಸ್ತೋತ್ರಪಾರಾಯಣಾದಿಗಳು ಕಳೆದ ತಿಂಗಳಿಂದಲೂ ನಡೆದಿದ್ದವು. ಅವುಗಳ ಯುಕ್ತತೆಯ ಬಗ್ಗೆ ಪ್ರಶ್ನಿಸಿದಾಗ ಅವರು ಹೇಳಿದ್ದು. ಒಳ್ಳೆಯ ಕೆಲಸ ಮಾಡುವುದು ನಿಜಕ್ಕೂ ಒಳ್ಳೆಯದು. ಹೀಗೆಯೆ ಇದು ಮುಂದುವರಿಯಲಿ ಅಂದು ಹೇಳಿದರು. ಆ ಕರಾಳ ದಿನ ಒಂದೇ ಬಿಟ್ಟಿತು. ಏಪ್ರಿಲ್ ೧೪-೧೯೫೦ ಶನಿವಾರ ಭಗವಾನ್ ರಮಣಮಹರ್ಷಿಗಳು ಪರಮಾತ್ಮನಲ್ಲಿ ಲೀನವಾದರು.

ನಮ್ಮ ಕಾಲದ ಮಹಾಸಂತರಲ್ಲಿ ರಮಣಮಹರ್ಷಿಗಳು ಒಬ್ಬರು. ಅವರ ನೆನಪು ಎಲ್ಲಾ ಕಾಲಕ್ಕು ಪ್ರಸ್ತುತ. ಇಂದು ನಾವು ಗತಕಾಲದ ಸ್ಮರಣೆಯನ್ನು ಅವಲಂಬಿಸಿ ಬದುಕಬೇಕಾಗಿದೆ. ಆ ಪ್ರಪಂಚವನ್ನು ಸೃಷ್ಟಿಸುವವರೆ ರಮಣರಂಥ ಮಹಾನುಭಾವರು. ಮಹರ್ಷಿಗಳು,ಅದ್ವೈತ ವೇದಾಂತ ಪ್ರಪಂಚದಲ್ಲಿ ಶತಮಾನದ ಧ್ರುವತಾರೆಯಾಗಿ ಮೆರೆಯುತ್ತಿರುವ ವಿಶ್ವವಿಖ್ಯಾತರಾದ ಶ್ರೀ ಭಗವಾನ್ ರಮಣಮಹರ್ಷಿಗಳು ಹೆಸರನ್ನು ಕೇಳದ ತತ್ವ ಜಿಜ್ಞಾಸುಗಳಿಲ್ಲ. ಮಹರ್ಷಿಗಳ ಜ್ಞಾನನಿಷ್ಠೆಯನ್ನು ಗುರುತಿಸದ ಪಂಡಿತರುಗಳಿಲ್ಲ. ಯಾವ ಆಡಂಬರವೂ ಇಲ್ಲದೆ ಸರಳ ನೇರವಾದ ಜೀವನವನ್ನು ನಡೆಸಿದವರು ರಮಣರು. ಸಾಮಾನ್ಯರಂತೆಯೇ ಸಹಜಜೀವನವನ್ನು ನಡೆಸಿದವರಿವರು. ಎಲ್ಲಾಭಕ್ತರೊಂದಿಗೆ ಎದ್ದು ಎಲ್ಲರೊಡನೆಯೇ ಊಟ, ತಿಂಡಿ, ನಿದ್ರಾದಿ



### ಶ್ರೀ ವೇಂಕಟೇಶ್ವರ ಕೇಂದ್ರ ಗ್ರಂಥಾಲಯ
### ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರ ವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತು ಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ತ್ವ ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇದೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ : ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.



ಗಳನ್ನು ಮಾಡುತ್ತ ತಮ್ಮ ಸಮಯವನ್ನು ಆನಂದದಿಂದ ಕಳೆಯುತ್ತಿದ್ದರು. ಇಂತ ರಮಣರ ದಿವ್ಯಸಾನ್ನಿಧ್ಯದಲ್ಲಿ ಇವರ ಸಂದರ್ಶನಕ್ಕೆಂದು ದೇಶ ವಿದೇಶಗಳಿಂದ, ಎಲ್ಲಾ ಕ್ಷೇತ್ರಗಳಿಂದಲೂ ಭಕ್ತಾದಿಗಳು ಬರುತ್ತಿದ್ದರು. ಇದರ ರಹಸ್ಯವೇನು? ಅಂದರೆ ಅವರಲ್ಲಿ ಅದೇ ಅದ್ವೈತ ಬ್ರಹ್ಮಾತ್ಮನಿಷ್ಠೆ, ಸರ್ವಾತ್ಮಭಾವ, ಜೀವನ್ಮುಕ್ತಿ ಸ್ಥಿತಿ. ಬ್ರಾಹ್ಮೀಸ್ಥಿತಿ, ನಿರ್ವಾಣಶಕ್ತಿ ಇದಕ್ಕೆ ಸಮಾನವಾದ ಸಂಪತ್ತು ೧೪ ಲೋಕಗಳಲ್ಲಿ ದೇರೊಂದಿಲ್ಲ. ಇದೇ "ಅಹಂ ಬ್ರಹ್ಮಾಸ್ಮಿ" ಮುಂತಾದ ಉಪನಿಷದ್ವಾಕ್ಯಗಳ ದಿವ್ಯಮಂಗಳ ಸಂದೇಶ-

ಸಕಲ ವೇದಾಂತಶಾಸ್ತ್ರಗಳ ಸಾರವಾಗಿರುವ 'ಬ್ರಹ್ಮಾತ್ಮದರ್ಶನ' ವನ್ನು ಅನುಭವದಲ್ಲಿ ಕಂಡುಕೊಂಡು ಬ್ರಹ್ಮನಿಷ್ಠರಾಗಿ, ಜೀವನ್ಮುಕ್ತರಾಗಿ ಬ್ರಹ್ಮಸ್ವರೂಪರೇ ಆಗಿದ್ದವರು, ಭಗವಾನ್ ರಣಮಹರ್ಷಿಗಳು. ವೇದಾಂತದರ್ಶನಕ್ಕೆ ಭಾಷ್ಯಕಾರರಾದ ಭಗವತ್ ಪೂಜ್ಯಪಾದಾಚಾರ್ಯರು ತಮ್ಮ ಭಾಷ್ಯಗಳಲ್ಲಿ ಸೂಚಿಸಿರುವಂತೆ ನಾವು ಕಂಡ ಬ್ರಹ್ಮಜ್ಞಾನಿಗಳೆಂದರೆ ಭಗವಾನ್ ರಮಣಮಹರ್ಷಿಗಳು. ಕಠೋಪನಿಷತ್ತಿನ ಮೃತ್ಯುವಿನಂತೆ; ಪ್ರಶ್ನೋಪನಿಷತ್ತಿನ ಪಿಪ್ಪಲಾದನಂತೆ; ಮುಂಡಕೋಪನಿಷತ್ತಿನ ಆಂಗೀರಸನಂತೆ, ಛಾಂದೋಪನಿಷತ್ತಿನ ಉದ್ದಾಲಕ ಹಾಗೂ ಸನತ್ಕುಮಾರರಂತೆ, ಬೃಹದಾರಣ್ಯಕೋಪನಿಷತ್ತಿನ ಯಾಜ್ಞವಲ್ಕರಂತೆ ಅದ್ವೈತವೇದಾಂತದರ್ಶನ ಆಚಾರ್ಯಶ್ರಮರಾದ ಗೌಡಪಾದ, ಶಂಕರ, ಸುರೇಶ್ವರರಂತೆ ಈ ಇಪ್ಪತ್ತನೆಯ ಶತಮಾನದಲ್ಲಿ ನಮಗೆ ಕಾಣಿಸಿಕೊಂಡು ಅದ್ವೈತ ಬ್ರಹ್ಮನಿಷ್ಠ ಸದ್ಗುರುಗಳೆಂದರೆ ಭಗವಾನ್ ರಮಣಮಹರ್ಷಿಗಳು. ರಮಣ ಭಗವಾನರು ಹೆಚ್ಚಾಗಿ ಮೌನಿಗಳಾಗಿಯೇ ಇರುತ್ತಿದ್ದರು. ಇವರ ಮುಖಾರವಿಂದದಿಂದ ಬರುತ್ತಿದ್ದ ಮಂಗಳ ವಾಕ್ಯಗಳು ಉಪನಿಷತ್ತುಗಳ ಸಾರವಾಗಿರುತ್ತಿದ್ದುವು, ಅರ್ಥಗರ್ಭಿತವಾಗಿರುತ್ತಿದ್ದುವು. ಉತ್ತಮ ಜಿಜ್ಞಾಸುಗಳು ಅಷ್ಟರಿಂದಲೇ ಕೃತಾರ್ಥರಾಗಿರುತ್ತಿದ್ದರು. ಇವರು ಇಪ್ಪತ್ತನೇಯ ಶತಮಾನದ ದಕ್ಷಿಣಾಮೂರ್ತಿಗಳು.

ಭಗವಾನ್ ರಮಣಮಹರ್ಷಿಗಳ ಉಪದೇಶಗಳನ್ನೆಲ್ಲಾ ಸಂಸ್ಕೃತ ಭಾಷೆಯಲ್ಲಿ ಉಪದೇಶಸಾರ, ರಮಣಗೀತಾ ಮತ್ತು ಸಂದರ್ಶನಂ : ಈ ಮೂರರಲ್ಲಿ ಕಾಣಬಹುದು. ಈ ಮೂರನ್ನು ರಮಣರ ಉಪದೇಶತ್ರಯ, ಪ್ರಸ್ಥಾಪನತ್ರಯ ಎನ್ನಬಹುದು.

ರಮಣಾಯ ನಮಸ್ತುಭ್ಯಂ
ರಮಣಾಯ ಸದಾತ್ಮನಿ
ಸ್ವಾನಂದಾಮೃತ ತೃಪ್ತಾಯ
ಜೀವನ್ಮುಕ್ತಾಯ ತೇಜಸೀ



# ಕನಕದಾಸರ ಕೀರ್ತನೆಗಳು

ಪ್ರೊ. ವಸಂತ ಕುಪ್ಪಗಿ.

ಕೀರ್ತನೆ ಎಂಬುದಕ್ಕೆ ಸ್ತೋತ್ರಮಾಡು, ಗುಣಗಾನ ಮಾಡು, ಹಾಡಿಹರಸು ಇತ್ಯಾದಿ ಅರ್ಥಗಳಿವೆ. ಹೀಗೆ ಅರ್ಥಗಳಿರುವಾಗ, ಈ ಪ್ರಪಂಚದಲ್ಲಿ ಬದುಕಬೇಕಾದರೆ, ಒಬ್ಬರನ್ನೊಬ್ಬರು ಮೆಚ್ಚಿ ಕೀರ್ತನೆ ಮಾಡಿದರೆ ಮಾತ್ರ ಸುಂದರ ಬದುಕು ನಿರ್ಮಾಣವಾಗುತ್ತದೆ. ಎಂದರೆ ನಾವು ನೆಮ್ಮದಿಯ ಜೀವನವನ್ನು ಮಾಡಬೇಕಾದರೆ, ನಮ್ಮ ಪರಿಸರದಲ್ಲಿರುವವರನ್ನೆಲ್ಲ ಪ್ರಸಂಗಗಳಿಗನುಸರಿಸಿ ಸ್ತೋತ್ರ ಮಾಡಿ, ಗುಣಗಾನ ಮಾಡಿ, ಹಾಡಿಹರಸಿ, ಅವರ ಸಹಾಯ ಸಹಕಾರ ಸಹಾನುಭೂತಿಗಳನ್ನು ಪಡೆಯಬೇಕಾಗುತ್ತದೆ. ನಮಗೆ ನೆಮ್ಮದಿಯ ಜೀವನ ಸಿಕ್ಕಾಗ, ಅದಕ್ಕೆ ನಿಮಿತ್ತವಾದರೂ ಕಾರಣೀಭೂತವಾಗಿರುವವರನ್ನು ಕೃತಜ್ಞತೆಗಳಿಂದ ನೆನೆಯಬೇಕಾಗುತ್ತದೆ. ಇದನ್ನು ಸಂಸ್ಕೃತಿ, ಧರ್ಮ ಎಂದು ಕರೆಯುತ್ತೇವೆ.

ನಮ್ಮ ನಿತ್ಯಜೀವನದಲ್ಲಿ ಪತಿಪತ್ನಿಯರು ಉಭಯತಾಪಿ ಮನಸ್ಸುಗೆದ್ದು ಸರಿಯಾದ ಸಂಸಾರ ನಿರ್ವಹಣೆ ಮಾಡಬೇಕಾದರೆ, "ನೀನೆಷ್ಟು ಚೆಲುವೆ, ಚೆಲುವ: ಎಷ್ಟು ಸಮಾಧಾನ ನಿನ್ನಲ್ಲಿ; ಕೆಲಸದ ಭಾರವೆಲ್ಲ ನಿನ್ನ ಮೇಲೆ; ನಿನಗೆ ಇಂತಹ ವಸ್ತುವೆಂದರೆ ಬಹಳ ಇಷ್ಟ; ಅದನ್ನು ಈ ತಿಂಗಳು ಪಡೆಯೋಣ" ಇತ್ಯಾದಿ ಮಾತುಗಳನ್ನಾಡಬೇಕಾಗುತ್ತದೆ. ಈ ಸಾಧನೆಯಲ್ಲಿ ಗುರಿಸಾಧನೆಯಾಗುತ್ತದೆ. ವಿರಸ ಕಡಮೆಯಾಗುತ್ತದೆ. ಸಾಮರಸ್ಯದ ಚೆಲುಮೆ ಚಿಮ್ಮುತ್ತದೆ. ಇದೇ ರೀತಿ ಅಧಿಕಾರದಲ್ಲಿರುವವರನ್ನು ಮೆಚ್ಚಿಸಲು, ಮೆಚ್ಚಿಸಿ ಕಾರ್ಯವನ್ನು ಈಡೇರಿಸಿಕೊಳ್ಳಲು, "ಇಂದ್ರಚಂದ್ರ, ನೀವು ಹಚ್ಚಿದ ಗಿಡ, ನೀವು ಮುಡಿಸಿದ ದೀಪ, ನೀವಿತ್ತ ಅನ್ನ" ಇತ್ಯಾದಿ ಸ್ತೋತ್ರ ಪರ ಮಾತುಗಳನ್ನು ಹೇಳಬೇಕಾಗುತ್ತದೆ. ಆಗ ಹಿಗ್ಗಿ ಹಿರೇಕಾಯಿ ಆದ ಮನಸ್ಸು ಕೊಡಬೇಕಾದುದನ್ನು ಕೊಡಬಾರದುದನ್ನೂ ಕೊಟ್ಟುಬಿಡುತ್ತದೆ. ಇತ್ತೀಚಿನ ಪರಿಸರದಲ್ಲಂತೂ, ರಾಜಕೀಯ ಸೂತ್ರಗಳನ್ನು ಹಿಡಿದವರ, ಸಾಮಾಜಿಕ ಸೂತ್ರಗಳನ್ನು ಹಿಡಿದವರ, ಆರ್ಥಿಕ ಸೂತ್ರಗಳನ್ನು ಹಿಡಿದವರ ಬೆಂಬಲ ನಮಗೆ ದೊರೆಯಬೇಕಾದರೆ ನಾವು ಉಘೋ ಉಘೋ ಎನ್ನಬೇಕಾಗುತ್ತದೆ. ಈ ರೀತಿ ನಡೆದು ಬರುತ್ತಿರುವ ಜಗತ್ತಿನಲ್ಲಿ ಪೌರಾಣಿಕ ಐತಿಹಾಸಿಕ ದಾಖಲೆಗಳು ಅನಂತ. ಕುಂಭಕರ್ಣ, ರಾವಣ ಮೊದಲಾದವರು ದೇವಾಧಿದೇವತೆಗಳಿಂದ ಪಡೆದ ವರದಾನಗಳ ಮೂಲ ಮಾರ್ಗ ಸ್ತೋತ್ರ. ದ್ರೌಪದಿಯು ಮಾನರಕ್ಷಣೆಮಾಡಿದ್ದು ಆಕೆ ಶ್ರೀಕೃಷ್ಣನನ್ನು ಕುರಿತು ಮಾಡಿದ ಸ್ತೋತ್ರಬಲ. ಈ ಕ್ರಮವೇ ಮುಂದುವರೆದುದರ ಪರಿಣಾಮವೋ ಏನೋ ಅರಸುಗಳ ಓಲಗದಲ್ಲಿ ವಂದಿಮಾಗಧರು ಬಂದರು. ಅವರು ಅರಸರ ಮನಗಳನ್ನು ಅರಳಿಸಿ ದಯೆಯನ್ನೋ,



ಧರ್ಮವನ್ನೋ, ವೀರವನ್ನೋ ಅಲ್ಲಿ ಬಿತ್ತಿ - ಒಟ್ಟು ಅರಸರನ್ನು ಕ್ರಿಯಾಶೀಲ ಸಂಪನ್ನರನ್ನಾಗಿ ಮಾಡಲು ಸ್ತೋತ್ರ ಮಾಡಿದರು. ಕಾರ್ಯ ನಿಭಾಯಿಸಿದರು. ಒಮ್ಮೊಮ್ಮೆ ಈ ಕ್ರಮವು ಉತ್ತರ ಕುಮಾರನಂತಹ ರಾಜರಲ್ಲಿ ರಾಜಕಾರಣಿಗಳಲ್ಲಿ ಅರ್ಥಕಳೆದುಕೊಂಡಿತು. ಆದರೂ ಇಂದಿಗೂ ಈ ಕ್ರಮವು ಅನುಚಾನವಾಗಿ ನಡೆದುಕೊಂಡು ಬಂದಿದೆ. ಎಂದಿಗಿಂತಲೂ ಇಂದಿನ ಪರಿಸರದಲ್ಲಿ ಅತಿಯಾಗಿದೆ. ಹೀಗಾಗಿ ಮುಗ್ಧಜನರನೇಕರು ಬಲಿಯಾಗತೊಡಗಿದ್ದಾರೆ. ಈ ಮಾತಿಗೆ ಎಲ್ಲರಿಗೂ ಗೊತ್ತಿರಬಹುದಾದ ಒಂದು ಸಾದೃಶ್ಯವನ್ನು ಕೊಡುವುದು ಒಳಿತು.

ಹಿಂದೊಮ್ಮೆ ನರಿ ಸ್ತೋತ್ರ ಮಾಡಿತ್ತು. ನರಿಯಂತಹ ಚತುರ, ನನ್ನನ್ನು ಚೆಲುವೆ ಎಂದ, ನನ್ನ ಸ್ವರ ಇಂಪು ಎಂದ - ಎಂದು ಮುಗಿಲ ಕನಸಿನಲ್ಲಿ ಕಾಗೆ ಉಬ್ಬಿ ಬಾಯಿಬಿಟ್ಟು ಹಾಡಿತು. ಬಾಯಿಯಲ್ಲಿ ಭದ್ರ



## ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು

**ಶ್ರೀ ವೆಂಕಟೇಶ ಸುಪ್ರಭಾತ**
ವ್ಯಾಖ್ಯಾನ ಸಹಿತ ಬೆಲೆ : 2-50

**ಗುರು ಶ್ರೀಶ ವಿಠಲದಾಸರ ಕೃತಿಗಳು**
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 6-00

**ದಾಸ ತತ್ತ್ವ ಪ್ರಕಾಶಿಕೆ**
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 10-00

**ಸ್ತೋತ್ರ ಕುಸುಮ ಮಾಲಾ**
ಸಂ - ಎಂ. ಎಸ್. ವೆಂಕಟಾಚಲಂ ಬೆಲೆ : 3-00

**ತ್ಯಾಗರಾಜ ಸ್ವಾಮಿ ಕೃತಿಗಳ ಪಲವು ಮುಖಗಳು**
-ಎನ್. ಎಸ್. ಮೂರ್ತಿ ಬೆಲೆ : 5-00

**ಭಕ್ತ ಪುರಂದರದಾಸರು**
-ಕೆ. ಅಪ್ಪಣ್ಣಾಚಾರ್ಯ ಬೆಲೆ : 2-60

**ಕರ್ನಾಟಕ ಹರಿದಾಸರು**
ತೆಲುಗು, ಹಿಂದಿ, ಆಂಗ್ಲ, ಕನ್ನಡ ಬೆಲೆ : 2-25

**ಶ್ರೀ ಶ್ರೀನಿವಾಸನ ಹಾಡುಗಳು**
(ಪ್ರಸನ್ನ ವೆಂಕಟದಾಸರು)
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 7-00

**ಶ್ರೀ ಪ್ರಸನ್ನ ವೆಂಕಟದಾಸರು**
- ವಿ. ಬಾದರಾಯಣ ಮೂರ್ತಿ ಬೆಲೆ : 0-80

**ಶ್ರೀ ಮಹಿಪತಿ ದಾಸರು**
- ದ. ನ. ಶಾನಭಾಗ ಬೆಲೆ : 0-85

ಅಂಚೆ ವೆಚ್ಚ ಪ್ರತ್ಯೇಕ. ಸಗಟು ಖರೀದಿಗೆ ಆಕರ್ಷಕ ಕಮಿಷನ್ ಉಂಟು. ಕೂಡಲೇ ಬರೆಯಿರಿ.

ಸಂಪಾದಕರು
ಪುಸ್ತಕ ಮಾರಾಟ ವಿಭಾಗ,
ಸಪ್ತಗಿರಿ, ತಿ.ತಿ.ದೇ., ತಿರುಪತಿ.



ವಾಗಿದ್ದ ಅನ್ನ ನೆಲಕ್ಕೆ ಬೀಳುವ ಮುನ್ನವೇ ನರಿಯ ಪಾಲಾಯಿತು. ಈ ತರಹದ ಸ್ತೋತ್ರಗಳಿಗೆ ಮಾತ್ರ ಯಾರೂ ಬಲಿಯಾಗಬಾರದು. ಅದಕ್ಕಾಗಿ ವಿವೇಕ ಪರ ಸ್ತೋತ್ರ ಮಾಡಬೇಕು. ಇದರಲ್ಲಿಯೂ ಸತ್ಪಾತ್ರತೆಯಿರಬೇಕು. ಸ್ತೋತ್ರ ಮಾಡಿಸಿಕೊಳ್ಳಬೇಕು. ಅಲ್ಲಿ ಅದರಿಂದ ಅಹಂಕಾರ ಬೆಳೆಯುವಂತಿರಬಾರದು. ಅಂಥಲ್ಲಿ ಮೆಚ್ಚಿಕೆಯು ಪ್ರಧಾನವಾಗಿರಬೇಕು. ಏಕೆಂದರೆ, ಮಾಡಿದ ಕಾರ್ಯಕ್ಕೆ ಅದರಿಂದ ಬಂದ ಪರಿಣಾಮಕ್ಕೆ ಮೆಚ್ಚಿಕೆ ಇರದಿದ್ದರೆ, ಬದುಕಿನಲ್ಲಿ ಉತ್ಸಾಹ ಮೂಡುವುದಿಲ್ಲ. ಚೈತನ್ಯವು ಗೋಚರಿಸುವುದಿಲ್ಲ. ಒಳ್ಳೆಯ ಪ್ರೇರಣೆಗಳೂ ದೊರೆಯಲಾರವು. ಅಂತೆಯೇ ಈ ಕ್ರಮದಲ್ಲಿ ಸ್ತೋತ್ರಗಳು ಬೇಕೆನ್ನಿಸಿ, ನಿಗೂಢವಾದ ಪ್ರಕೃತಿ ಶಕ್ತಿಯಲ್ಲಿ ಅಡಗಿರುವ ಚೈತನ್ಯ ಪುರುಷನನ್ನು ಕಾಣಲು, ಆತನ ಶಕ್ತಿಪ್ರಭಾವದಲ್ಲಿರುವ ನಮಗೆ ಆತನು ನಿತ್ಯ ಅಪ್ಯಾಯನವಾಗಿರಬೇಕೆಂಬ ಅನುಭಾವ ದೃಷ್ಟಿಯು ಬೇಕಾಯಿತು. ಆ ದೃಷ್ಟಿ ಸಂಪಾದನೆಗಾಗಿ ಮಾಡಬೇಕಾದ ಅನುಷ್ಠಾನ ಕ್ರಮದಲ್ಲಿ ಆ ಶಕ್ತಿ - ಪುರುಷರ ಸ್ತೋತ್ರವು ಅವಶ್ಯಬೇಕಾಯಿತು. ಅದರಲ್ಲಿ ಆತ್ಮಪರಿಶೋಧನೆಯಾಗಿ, ನಿಚ್ಚಳವಾದ ತಿಳಿವಳಿಕೆಯ ಮಾರ್ಗವು ನಿರ್ಮಾಣವಾಗಿ, ಸ್ಪಷ್ಟ ಸಂತೃಪ್ತಿ ಅರ್ಥಾತ್ ನಿಚ್ಚಳ ಜ್ಞಾನ ಅರ್ಥಾತ್ ದಿವ್ಯದರ್ಶನ ಅನೇಕ ಸಾಧಕರಿಗೆ ಆಯಿತು. ಅದನ್ನು ಪಡೆಯುವುದಕ್ಕೆ ವೇದಗಳ ಕಾಲದಲ್ಲಿ ಋಕ್ ಬಂದುವು. ಅಗಾಧವಾದ ಸೃಷ್ಟಿಯ ಕ್ರಮವನ್ನು ಮೆಚ್ಚಿ ಆ ಋಕ್ ಹಾಡಿದುವು. ಪ್ರಕೃತಿಯಿಂದ ನಿರ್ಮಾಣವಾದ ಬದುಕಿಗೆ ಪ್ರಕೃತಿಯೇ ನೀರು, ಬೆಂಕಿ, ಆಕಾಶ, ಮಣ್ಣು ಗಾಳಿಗಳನ್ನು ಒದಗಿಸಬೇಕು. ಈ ಕೊಡುಕೊಳ್ಳುವ ಕ್ರಿಯೆಯಲ್ಲಿ ಚೈತನ್ಯಬೇಕು. ಮೂಲಕ್ಕೆ ಅದೇ ಮೂಲವೇ ಆಧಾರವಾಗಬೇಕು. ಇದನ್ನು ಬೆಸಿಸಿಕೊಡುವುದೇ ಪೌರುಷ. ಅದು ನಮಗೆ ಸಹಜವಾಗಿ ಹರಿದು ಬರಬೇಕಾದರೆ, ಶಕ್ತಿಯ ಸಹಕಾರದಲ್ಲಿ, ಅನುಗ್ರಹವಾಗಬೇಕು. ಈ ಅನುಗ್ರಹಕ್ಕೆ ನಾವು ಸೃಷ್ಟಿಯ ಕ್ರಮವನ್ನು ಮೆಚ್ಚಿ ಸ್ತೋತ್ರಮಾಡಬೇಕು. ಈ ಸ್ತೋತ್ರ ಕ್ರಮವು ವೇದಗಳ ಮೊದಲಲ್ಲಿಯೇ ಬಿತ್ತಿಬೆಳೆದ ಬೆಳೆ. ಈಗಂತೂ ನಮಗೆ ವೇದಗಳಲ್ಲಿ ಈ ಬೀಜದ ಬೆಳೆಯು ಸ್ಪಷ್ಟವಾಗಿ ಕಂಡಿದೆ.

ಸೃಷ್ಟಿಯ ಕ್ರಮದಲ್ಲಿಯೇ ಲಯವಿರುವುದರಿಂದ, ಸ್ತೋತ್ರದಲ್ಲಿಯೂ ಸಂಗೀತವಿರುವುದರಿಂದ, ಲಯನಾದಮಯ ಗುಣಗಾನದ ಸ್ತೋತ್ರಗಳಿಗೆ ಜಡವೆಂದು ನಾವು ಕರೆಯುವ ಪರ್ವತವೂ ಕರಗುತ್ತದೆ. ತಟಸ್ಥವಾಗಿ ನಿಂತ ಗಿಡ ಮರಗಳು ಬೀಸತೊಡಗುತ್ತವೆ. ಅಂಧಕಾರವಿದ್ದಾಗ ಬೆಳಕು ಬೆಳಗುತ್ತ ಬರುತ್ತದೆ. ನೆಲ ಸಮ ಬರಗಾಲವಾಗತೊಡಗಿದಾಗ, ಆಕಾಶದಿಂದ ಮಳೆ ಧಾರಾಕಾರವಾಗಿ ಕರುಣೆಗೊಂಡ ನೆಲ ಸಮೃದ್ಧಿಯಾಗುತ್ತದೆ. ಇದೆಲ್ಲ ಭಾವಕ್ಕೆ ಸಂಗೀತದ ಲಯ ಸಾಂಗತ್ಯವಾದಾಗ ನಡೆಯುವ ಚೇತೋಹಾರಿ ಪರಿಣಾಮ - ಅದೇ ಪರಮಾತ್ಮನ ದರ್ಶನ. ಈ ಸಾಂಗತ್ಯದ ಸಮೃದ್ಧಿಗಾಗಿ, ಭಾವ ಅರ್ಥಗಳ ಸಂಯೋಗದಲ್ಲಿ ಸಂಗೀತವು ದಿವ್ಯ ಅನುಸಂಚಾರಿಯಾಗಿ ಕ್ರಿಯಾಶೀಲವಾಗಿರುವುದು ಮಹತ್ವದ ಕಾರಣ. ಈ ಸಂಯೋಜನೆಯೇ ಪರಮಾತ್ಮನ ಕರುಣೆ. ಅಂತೆಯೇ ಈ ಸಂಯೋಜನೆಯಲ್ಲಿಯ ಸ್ತೋತ್ರ ಪದ್ಯಗಳು ಅರ್ಥಾತ್ ಕೀರ್ತನ ಪದ್ಯಗಳು ಭಕ್ತಿ ಸಾಹಿತ್ಯದ ಚೇತನಾ ಶ್ರೀ ಆಗಿವೆ. ಪರಮಾತ್ಮನ ಅಂತಸ್ಸುಗಳನ್ನೆಲ್ಲ ನಮ್ಮ ವಿವೇಕದಲ್ಲಿ ತುಂಬಿಕೊಂಡು ದರ್ಶನಾಮಯಿಯಾಗಲು ದಾರಿದೀಪವಾಗಿದೆ.

ಗೋವಿಂದ ಗೋವಿಂದ ಎನ್ನಲರಿಯದೆ
ವೃಥಾ ನೋವಿಂದ ಭಂಗವ ಪಡೆವುದುಚಿತವೆ?
ನೇಮವಿಲ್ಲದ ಹೋಮವೇತಕಯ್ಯಾ -
ರಾಮನಾಮವಲ್ಲದೆ ಮತ್ತೆ ನಮಗೆ ಬೇರೊಂದೆ
ಸಂಸಾರವೆಂಬ ಸಾಗರವನುತ್ತರಿಸುವವರೆ
ಕಂಸಾರಿಯೆಂಬ ನಾಮವೊಂದೆ ಸಾಕು ಮರುಳೆ!

ಎಂಬಂತಹ ಸ್ತೋತ್ರಗಳ ಪಲ್ಲವಿಗಳಲ್ಲಿ ಕೇವಲ ಹೊಗಳಿಕೆಯಿಲ್ಲ. ಮೆಚ್ಚಿಗೆಯಿದೆ. ಆತ್ಮಾನುಸಂಧಾನವಿದೆ. ಪಶ್ಚಾತ್ತಾಪದ ತಳಮಳದಲ್ಲಿ ವಿವೇಕದ ಸ್ಪಷ್ಟ ಬೆಳಕಿದೆ. ಆದ್ದರಿಂದ ಪರಮಾತ್ಮಪರ ಸ್ತೋತ್ರಗಳಲ್ಲಿ ಮನುಷ್ಯನು ಸಾಧಿಸಬೇಕಾದ ವಿವೇಕದ ಸಾಧನೆಯಲ್ಲಿಯ ಏರಿಳಿತಗಳು, ಅದನ್ನು ಫಲಪ್ರದ ಸಾಧಿಸುವಲ್ಲಿ ಮಾಡಬೇಕಾದ ಯತ್ನಗಳಿಗೆ ಸ್ಪಷ್ಟ ಸುಳಿವು ಇದೆ. ಅಂತಹ ಕೆಲವು ಸುಳಿವು :

ನೀರ ಮುಣುಗಲು ಏಕೆ ನಾರಿಯನು ಬಿಡಲೇಕೆ
ವಾರಕೊಂದು ಪವಾಸವಿರಲೇತಕೆ?
ನಾರಸಿಂಹನ ದಿವ್ಯನಾಮವನು ನೆನೆವರೆ
ಘೋರಪಾತಕವಲ್ಲ ತೊಲಗಿಪೋಗುವುದು
ಅಂಬರ ತೊರೆಯಲೇಕೆ ತಾಂಬೂಲ ಬಿಡಲೇಕೆ
ಡಂಭತನದಲಿ ನೀನಿರಲೇತಕೆ?
ಅಂಭೋಜನಾಭನನು ಭಾವದಲಿ ನೆನೆದರೆ
ಇಂಬುಂಟು ವೈಕುಂಠದೊಳಗೆ ಅಯ್ಯಾ

ಯತಿಯಾಗಬೇಡ ವೈರಾಗ್ಯವರಿತು ಸಕಲ
ವ್ರತದ ಮಾಡುವೆನೆಂಬ ನೇಮ ಬೇಡ
ಶ್ರುತಿ ಸ್ಮೃತಿಗಳನರಿತು ನಡೆವೆನೆನಬೇಡ ಶ್ರೀ
ಪತಿಯ ಶ್ರೀ ನಾಮವೊಂದೇ ಸಾಕು ಮರುಳೆ
ತನುವದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ
ವನಿತೆಯನು ಬಿಟ್ಟು ತಪವಿರಲು ಬೇಡ
ಅನುವರಿತು ನೀರೊಳಗೆ ಬಿಡದೆ
ಮುಳುಗಲುಬೇಡ

ವನಜಾಕ್ಷ ನಾಮವೊಂದೇ ಸಾಕುಮರುಳೆ

ಗನ್ನಗತಕದ ಮಾತು ಇನ್ನು ನಿನಗೇತಕೊ
ಮುನ್ನ ಮಾಡಿದ ಕರ್ಮಭರವೊಡಲಿವೆ
ಉನ್ನತದ ಕಾಗಿನೆಲೆಯಾದಿ ಕೇಶವ ಸುಪ್ರ-
ಸನ್ನ ಮೂರುತಿಯನ್ನು ಭಜಿಸೆಲೋ - ಆತ್ಮಾ

-ನಿಸರ್ಗದತ್ತ ಗುಣಗಳನ್ನು ತೂರಿ ಬದುಕಲು ಸಾಧ್ಯವಿಲ್ಲ. ಶಕ್ಯವಿಲ್ಲ. ಅಲ್ಲದೆ ಅಂತಹ ಗುಣಗಳ ಮರ್ಯಾದೆಯನ್ನರಿತು ಅನುಭವಿಸಬೇಕಾದುದು ಧರ್ಮ, ಮರ್ಯಾದೆ ಮೀರುವ ಸಂದರ್ಭ ಬಂದಾಗ, ಎಚ್ಚರಿಸುವ ವಿವೇಕಪರ ಮಾತುಗಳನ್ನು ಕೇಳಬೇಕು. ಆ ಮಾತುಗಳನ್ನು ನಮ್ಮದಾಗಿಸಿಕೊಳ್ಳಲು, ಧೀಶಕ್ತಿಯನ್ನು ಪಡೆಯುವ ಸಾಧನೆಗೆ ಈ ಸ್ತೋತ್ರ ಪದ್ಯಗಳಲ್ಲಿ ನಿಚ್ಚಳ ಮಾರ್ಗದರ್ಶನವಿದೆ. ಈ ತತ್ತ್ವದ ಸೂಕ್ಷ್ಮತೆಯನ್ನು ಎಳೆ ಎಳೆಯಾಗಿ ಬಿಡಿಸಿ ಅರ್ಥ ಮಾಡಿಕೊಳ್ಳಲು ನಿಸರ್ಗದ ಐದೂ ತತ್ತ್ವಗಳು ಮಹತ್ತ್ವಪೂರ್ಣವೆಂಬುದಕ್ಕೆ ಅಲ್ಲಿ ಅಂಗೈಕನ್ನಡಿ ಇದೆ. ಅವುಒಂದೇ ಕಡೆ ಸಂಯೋಜಿತವಾದರೂ ಸ್ವತಂತ್ರ. ಈ ನಿಗೂಢದ ಅರಿವನ್ನು ಮೂಡಿಸಿಕೊಂಡಾತ ಪರಮಯೋಗಿ. ಈ ಸಾಧನೆಯ ಅರಿವನ್ನೇ ಭಕ್ತಿಪಂಥವು ಸುಲಭಗೊಳಿಸುತ್ತದೆ.

ಭಕ್ತಿ ಪಂಥದಲ್ಲಿ ಆತ್ಮಶೋಧನೆ, ಆತ್ಮನಿವೇದನೆಗಳಿಗೆ ಬಹಳ ದೊಡ್ಡ ಸ್ಥಾನ. ಈ ರೀತಿಯ ಸಂಚಾಲನೆಯಲ್ಲಿ ಪರಿತಪ್ತವಾಗಿ ಪರಿಶುದ್ಧವಾದ ಚೇತನವು ತನ್ನ ಪರಿಸರ ಅರ್ಥಾತ್ ತಾನು ಬಾಳುತ್ತಿರುವ ಸಮಾಜವನ್ನೇ ಪರಿಷ್ಕೃತಗೊಳಿಸಿ, ತಾನಲ್ಲಿ ಬೋಧನಪರ ನಿರ್ದೇಶಕನಾಗದೆ ತಾನು ಅಲ್ಲಲ್ಲ ಬಾಳುತ್ತಲೇ ಸಾಂಕೇತಿಕ ಧ್ವನಿಯಾಗುತ್ತಾನೆ. ಅಂತೆಯೇ ಭಕ್ತಿಪಂಥದ ಹರಿಕಾರರ ಸಾಹಿತ್ಯವು ಶ್ರೀಮಂತ ಪ್ರಬೋಧಿನಿ ಮತ್ತು ಪ್ರಭಾವಕಾರಿ ಅನುಸಂಧಾನಿತ ಕ್ರಿಯಾಸಂಜೀವಿನಿ.

ಈ ಭಕ್ತಿ ಸಾಹಿತ್ಯದ ಕೊಡುಗೆಗೆ, ಭರತವರ್ಷದಲ್ಲಿ ಕರ್ನಾಟಕದಿಂದ ಅಪಾರ ಕೊಡುಗೆ ಸಂದಿದೆ. ಹರಿಶರಣರಿಂದ ವಿಶಿಷ್ಟತೆಯನ್ನು ಪಡೆದ ಭಕ್ತಿಯು ಕನ್ನಡದ ನೆಲದಲ್ಲಿ ಕಲ್ಪವೃಕ್ಷವೇ ಆಯಿತು. ಅದು ಮುಂದೆ ನಾರದನ ಭಕ್ತಿ ಸ್ತೋತ್ರಗಳನ್ನೆಲ್ಲ ಅರಗಿಸಿ, ಅಲ್ಲಿಯ ಸತ್ತ್ವವನ್ನೆಲ್ಲ ಕೀರ್ತನೆಗಳಲ್ಲಿ ಅನುಭಾವಿಸಿ, ಕನ್ನಡ ನೆಲದ ಅಂಚು ಅಂಚಿಗೂ ಬದುಕಿನಲೆಯನ್ನೂ, ಬದುಕಿನ ನೆಲೆಯನ್ನೂ, ಬದುಕಿನಲ್ಲಿಯೇ ತೋರಿಸಿ ವಿಶ್ವಾಸವನ್ನು ಮೂಡಿಸಿ ಭಕ್ತಿಕಾಮಧೇನುವಾಗಿ ಅಪರಂಪಾರ ಜಾಗೃತಿಯನ್ನುಂಟುಮಾಡಿತು. ಅಂತೆಯೇ ಇನ್ನೂ ಹರಿದಾಸರು ಆತ್ಮೋದ್ಧಾರ ಮಾಡಿಕೊಂಡು ಆತ್ಮೋದ್ಧಾರದ ಮಾತುಗಳನ್ನು ಹಾಡುತ್ತ ತನ್ಮಯತೆಯ ಸಾಗರಕ್ಕೆ ಹಾರುವ ಆನಂದದ ಹಾಡು ಶ್ರೋತೃವನ್ನು ಕಾಣಬಹುದಾಗಿದೆ. ಅವರು ಹಾಡುವ ಶೈಲಿ, ಪ್ರಸ್ತುತಿಗಳು ಸನ್ನಿವೇಶಕ್ಕೆ ತಕ್ಕ ರೀತಿ ಮೊರೆಯುವಂತಿಲ್ಲ ಅವೆಲ್ಲ ಅವರಲ್ಲಿಯೇ ಇಲ್ಲ. ತಾವು ಹಾಡುತ್ತಿರುವುದರಲ್ಲಿ ಅವರು ತನ್ಮಯರಾಗಿರುವುದರಿಂದ, ಆ ಹಾಡುಗಳಲ್ಲಿಯ ಭಾವ ಪಕ್ವವಾಗಿ ಹೃದಯತಟ್ಟಿ ಮಾತು ಬೇಕಾಗಿ, ಅಲ್ಲಿ ಬೆಳಕಿನ ಬಳ್ಳಿ ಹಬ್ಬಿಕೊಳ್ಳುತ್ತದೆ. ಈ ಬೆಳಕಿನ ಹಾಡಿಗೆ ಗೆಜ್ಜೆ, ಏಕತಾರಿ ತಂಬೂರಿ, ಚಿಟಿಕಿ ತಾಳಗಳು ಜೀವನ ಸಂಗೀತವನ್ನು ಸಾಂಗತ್ಯಗೊಳಿಸಿ, ಕತ್ತಲೆಯ ತೆರೆಗಳು ಸರಿದು, ಗಾಢ ಮಾಯಾಮಯ ಅಂತರಾಳದಲ್ಲಿ ಈ ಬೆಳಗಿನ ಹಾಡು ಸಂವೇದನೆ ನೀಡಿ, ಬದುಕನ್ನು ಹದಗೊಳಿಸುತ್ತದೆ. ತತ್ಫಲವಾಗಿ ನೆಮ್ಮದಿ ಮೂಡುತ್ತದೆ. ಈ ಪರಿಣಾಮವು ಹರಿದಾಸರ ಕೀರ್ತನೆಗಳಲ್ಲಿ ದಟ್ಟವಾಗಿದೆ. ಅಂತೆಯೇ ಈ ಕೀರ್ತನೆಗಳ ಪ್ರಭಾವದಲ್ಲಿ ಉತ್ತರ ಧ್ರುವ ದಕ್ಷಿಣ ಧ್ರುವಗಳ ಮಿಲನವಾಗುತ್ತದೆ. ಹಾವು ವಿಷಕಳೆದುಕೊಂಡು ಅಮೃತವುಣಿಸುತ್ತದೆ. ಎಂದರೆ ಇಲ್ಲಿ ಪರಮಾತ್ಮತತ್ತ್ವದ ಕಣಕಣವೂ ಅರ್ಥವಾಗುತ್ತದೆಂದು ಅರ್ಥ. ಇಂಥ ತೀವ್ರ ಪ್ರಭಾವ ಬೀರುವ ಕನ್ನಡದ ಹರಿದಾಸ ಸಾಹಿತ್ಯದ ಹರಿದಾಸರಲ್ಲಿ ಯಮಳರಾದ ಪುರಂದರ - ಕನಕದಾಸರ ಕಾಣ್ಕೆ ಅಪಾರ.

ಪುರಂದರ ಕನಕದಾಸರು ಜೀವನವನ್ನು ಬಾಳಿದರು. ಜೀವನದ ಬಗ್ಗೆ ಕಲ್ಪನೆಯ ಜಾಲಗಳನ್ನು ಹಬ್ಬಿಸಲಿಲ್ಲ. ಜೀವನದ ಸ್ಪಷ್ಟ ಚಿತ್ರಣವನ್ನು ಕೊಟ್ಟರು. ಸೃಷ್ಟಿಯ ಮೂಲದ ತತ್ತ್ವವನ್ನು ನಿವೇದಿಸಿದರು. ಅವರು ಅನುಭವಿಸಿದ ಅನುಭವದ ಸಂಗ್ರಹವನ್ನೆಲ್ಲ ಲೋಕದ ಹಿತದ ದೃಷ್ಟಿಯಿಂದ ಯೋಗ್ಯವೆನಿಸಿದುದನೆಲ್ಲ ತಮ್ಮ ವಿವೇಕದ ಹಂಚಿನಲ್ಲಿ ಹಾಕಿ ಹುರಿದು ಸ್ವಾದಗೊಳಿಸಿ ಹಂಚಿದರು. ಆ ಪರಿಣಾಮವಾಗಿ ವ್ಯಕ್ತಿಯು ತನ್ನ ಅನುಭವಕ್ಕೆ ಆ ಮಾತುಗಳನ್ನು ಒರೆಗೆ ಹಚ್ಚಿ ಪಾವನನಾದ. ಅಂತೆಯೇ ಅವರ ಕೀರ್ತನೆಗಳಿಗೆ ಸ್ವಂತಿಕೆಯ ಮೌಲ್ಯವಿದೆ. ಬಾಳಿದ್ದನ್ನೇ ಹೇಳಿರುವುದರಿಂದ ಅದರಲ್ಲಿ ಒಣ ಆಡಂಬರದ ಉಪದೇಶವಿಲ್ಲ. ಬದುಕಲು ಸೂಚನೆ ನೀಡುವ ಧ್ವನಿಯಿದೆ. ಈ ಧ್ವನಿಯೇ ಅಮೃತತ್ತ್ವ. ಓಂಕಾರದ ಅಮರತ್ವ. ಮಾಗಿದ ಅನುಭವವು ಮಾತಿನಲ್ಲಿ ಮೌಕಿಕವಾಗಿ ಹೇಗೆ ಧ್ವನಿಯು ಬೆಳಕಾಗಿದೆ ನೋಡಿ:

ಹುಟ್ಟುತೇನು ತರಲಿಲ್ಲ
ಹೋಗುತ್ತೇನು ಒಯ್ಯಲಿಲ್ಲ
ಸುಟ್ಟು ಸುಟ್ಟು ಸುಣ್ಣದ ಹರಳಾಯಿತೀದೇಹ
ಹೊಟ್ಟೆ ಬಲು ಕೆಟ್ಟದೆಂದು
ಎಷ್ಟು ಕಷ್ಟಬಟ್ಟು ಪ್ರಾಣ
ಬಿಟ್ಟು ಹೋಗುವಾಗ
ಗಂಟುಬಿಟ್ಟ ಕಾಣಲಿಲ್ಲವೊ
ಅದಕ್ಕಾಗಿ

ಸತ್ಯವಂತರ ಸಂಗವಿರಲು ತೀರ್ಥವೇತಕೆ
ನಿತ್ಯ ಜಪವಾಸವಿರಲು ಭಯವು ಏತಕೆ ?
ಗುರುಹಿರಿಯರ ಅರಿಯದವನ ಅರಿವದೇತಕೆ
ಪರಹಿತಾರ್ಥವಿಲ್ಲದವನ ಶರೀರವೇತಕೆ
ಹರಿಯ ಸ್ತುತಿ ಮಾಡದವನ ಜನುಮವೇತಕೆ
ಸತಿಯವರ ತೊರೆಯುವಂಥ ಹೊಲೆಯು ಏತಕೆ
ಮಾತು ಕೇಳದೆ ಮಲತು ನಡೆವ ಮಕ್ಕಳೇತಕೆ
ಭೀತನಾಗಿ ಓಡಿ ಬರುವ ಬಂಟನೇತಕೆ
ಪ್ರೀತಿಯಿಂದ ಎಡೆಯನಿಕ್ಕದ ಊಟವೇತಕೆ
ಸೋತ ಹೆಣ್ಣಿಗೆ ಇದಿರು ನಡೆವ ಸುಗುಣನೇತಕೆ

ತಾನು ಉಣ್ಣದ ಪರರಿಗಿಕ್ಕದ ಧನವಿದ್ದೇತಕೆ
ಮಾನ ಹೀನನಾಗಿ ಬಾಳ್ವ ಮನುಜನೇತಕೆ
ನ್ಯೂನ ಹೆಚ್ಚು ನೋಡುವಲ್ಲಿ ಇರುವುದೇತಕೆ
ತನ್ನ ಬಳಗವೆರೆಸಿ ಉಣ್ಣದ ಭಾಗ್ಯವೇತಕೆ

ತಾನು ತನ್ನರಿಯದಂಥ ಪ್ರೌಢನೇತಕೆ
ಸ್ನಾನ ಸಂಧ್ಯಾನವಿಲ್ಲದ ಶೀಲವೇತಕೆ
ಧ್ಯಾನದೊಳಗೆ ಕೃಷ್ಣನಿಲ್ಲದ ತನುವಿದ್ದೇತಕೆ
ಸನ್ನೆಯರಿತು ನಡೆಯದಂಥ
ಸತಿ (ಪತಿ)ಯಿದ್ದೇತಕೆ
ಭಿನ್ನವರಿತು ನಡೆಯದಂಥ ಸ್ನೇಹವೇತಕೆ
ಮುನ್ನ ಕೊಟ್ಟು ಹುಟ್ಟಲಿಲ್ಲ ಬಯಸಲೇತಕೆ

-ಇಂತಹ ಬದುಕಿನ ಬೆಳಕಿನಲ್ಲಿ ಸಾಧನ ಮಾರ್ಗ ಸ್ಪಷ್ಟ. ಅನಂತರ ಅಲ್ಲಿ ಬಹು ಸುಲಭವಾಗಿ "ಚೆನ್ನ ಆದಿಕೇಶವನಿರಲು ದೈವವೇತಕೆ?" "ಸಾಧು ಸಜ್ಜನ ಸತ್ಯಗುಣಕಿದಿರುಂಟೆ ಆದಿಕೇಶವನಲ್ಲದೆ ದೈವವುಂಟೆ?" ಎಂದು ತಿಳಿಯುವ ಮಹಾತ್ಮಜ್ಞಾನ.

ಹರಿದಾಸರ ಪರಂಪರೆಯಲ್ಲಿ ಈ ಮೊದಲೇ ಸೂಚಿಸಿದಂತೆ ಯತಿಗಳನ್ನುಳಿದರೆ, ಸಂಸಾರಿಕರಲ್ಲಿ ಪುರಂದರ ಕನಕರು ಅಗ್ರಗಣ್ಯರು. ಅವರು ತುಂಬು ಜೀವನವನ್ನು ಅನುಭವಿಸಿ ಸತ್ಯಾಸತ್ಯತೆಯ ನಿಷ್ಕರಗಳನ್ನು ಸಮಾಜದ ಹಿತಕ್ಕಾಗಿ ಕೀರ್ತನೆಗಳಾಗಿ ಹಾಡಿದರು. ಈ ಮುನ್ನ ವಿಶ್ಲೇಷಿಸಿದ ಪ್ರಕಾರ ಇವು ಸ್ತೋತ್ರಗಳು.

ಸ್ತೋತ್ರವೆಂದರೆ ಗುಣಗಾನ ಮಾಡುವುದು. ಕೀರ್ತನೆಗಳೆಂದರೂ ಗುಣಗಾನವನ್ನೇ ಮಾಡುವುದೇ ಆಗಿದೆ. ಇಲ್ಲಿಯ ವೈಶಿಷ್ಟ್ಯವೆಂದರೆ, ಪರಮಾತ್ಮನನ್ನು ನೆನೆವಾಗ ಅರ್ಥಾತ್ ಆತನ ಗುಣಗಳನ್ನು ನೆನೆವಾಗ ಭಕ್ತನಾದವನು ತನ್ನನ್ನು ತಾನು ಸಮರ್ಪಿಸಿಕೊಳ್ಳಬೇಕಾಗುತ್ತದೆ. ಅನಂತರ ನಿವೇ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ತಿರುಮಲೆ
# ನೂತನ ಆರ್ಜಿತಸೇವೆಗಳು

ತಿರುಮಲೆಯ ಆಲಯದಲ್ಲಿ ಯಾತ್ರಿಕರ ಅನುಕೂಲಕ್ಕಾಗಿ ಹೊಸ ರೀತಿಯ ಆರ್ಜಿತ ಸೇವೆಗಳನ್ನು ಪ್ರವೇಶಗೊಳಿಸಲಾಗಿದೆ. ಅವುಗಳ ವಿವರಗಳು ಈ ಕೆಳಕಂಡಂತಿವೆ.

| ಸೇವೆಯ ಹೆಸರು | ಶುಲ್ಕ | ಪ್ರಸಾದ | ಪ್ರವೇಶಾವಕಾಶ |
|---|---|---|---|
| 1. ಕಿರಿಯ ಲಾಡು ಪಡಿಸೇವೆ | ರೂ. 250 | 10 ಕಿರಿಯಲಾಡು | ಇಬ್ಬರಿಗೆ |
| 2. ಆರ್ಜಿತ ಲಾಡು ಪಡಿ | ರೂ. 2500 | 30 ದೊಡ್ಡ ಲಾಡು | ಐವರಿಗೆ |
| 3. ಪ್ರೋಕ್ತಂ ಲಾಡು ಪಡಿ | ರೂ. 750 | 30 ಕಿರಿಯ ಲಾಡು | ಐವರಿಗೆ |
| 4. ಅರ್ಚನಾನಂತರ ದರ್ಶನ | ರೂ. 100 | -- | ಒಬ್ಬರಿಗೆ |

ಸರ್ವದರ್ಶನದ ಸಮಯದಲ್ಲಿ ವೈಕುಂಠಂ ಕ್ಯೂಕಾಂಪ್ಲೆಕ್ಸ್ ಮೂಲಕ ದರ್ಶನಕ್ಕೆ ಅನುಮತಿಸಲಾಗುವುದು. ಶುಲ್ಕವನ್ನು ತಿರುಮಲೆಯ ವಿಜಯಾ ಬ್ಯಾಂಕ್ ಕೌಂಟರಿನಲ್ಲಿ ಸಲ್ಲಿಸಬೇಕು.

ಅರ್ಚನಾನಂತರ ದರ್ಶನದ ಟಿಕೆಟ್‌ಗಳನ್ನು ತಿರುಮಲೆಯ ವಿಜಯಾಬ್ಯಾಂಕ್ ಕೌಂಟರಿನಲ್ಲಿ ಕೊಂಡುಕೊಳ್ಳಬಹುದು. ಶುಕ್ರವಾರಗಳ ಹೊರತು ಮಿಕ್ಕ ದಿನಗಳಲ್ಲಿ ಅನುಮತಿಸಲಾಗುವುದು. (ನಿಜಪಾದದರ್ಶನ ಸೇವೆಯ ರೀತಿಯಲ್ಲಿ) ಈ ಸೇವೆಯ ಕಾಲಾವಧಿ 30 ರಿಂದ 45 ನಿಮಿಷ ಕಾಲ ಮಾತ್ರವೇ ಆದ್ದರಿಂದ ಒಂದು ದಿನದಲ್ಲಿ ಸಾಮಾನ್ಯವಾಗಿ 750 ಟಿಕೆಟಗಳನ್ನು ಮಾತ್ರ ನೀಡಲಾಗುವುದು ಹಾಗೂ ದೇವಾಲಯದ ಅಧಿಕಾರಿಗಳು ಈ ಸೇವೆಯನ್ನು ದೇವಾಲಯದ ಇತರ ಅಗತ್ಯಗಳಿಗೆ ತಕ್ಕಂತೆ ಒಂದು ದಿನ ಅಥವಾ ಹೆಚ್ಚು ದಿನಗಳ ಕಾಲ ನಿಲ್ಲಿಸುವ ಅಧಿಕಾರ ಪಡೆದಿರುತ್ತಾರೆ.

ಯಾತ್ರಿಕರು ಈ ಅವಕಾಶಗಳನ್ನು ಬಳಸಿಕೊಳ್ಳಬೇಕಾಗಿ ವಿನಂತಿ.

**ತಿ.ತಿ.ದೇ.**

ದನೆಯ ತೆರೆಗಳು ಬಂದಾಗ ಪರಿಶುದ್ಧ ಸಮಾಜ ನಿರ್ಮಾಣಕ್ಕೆ ಅನುಭೂತಿಯು ಅಲ್ಲಿ ಸೂಸತೊಡಗುತ್ತದೆ. ಅಲ್ಲಿ ಪರಮಾತ್ಮತ್ತ್ವದ ಗುಣಗಳು ಎದ್ದು ಕಾಣತೊಡಗಿದಾಗ ಹೃದಯದಲ್ಲಿಯ ತಳಮಳವು ನಿಂತು, ಪ್ರಸನ್ನತೆ ಮೂಡುತ್ತದೆ. ಆದ್ದರಿಂದ ಭಕ್ತಿಸಾಹಿತ್ಯದ ಕೀರ್ತನೆಗಳನ್ನು ಕೇವಲ ಸ್ತೋತ್ರಗಳೆಂದು ಹೇಳಲು ಬರುವುದಿಲ್ಲ. ಅಲ್ಲಿ ಪರಮಾತ್ತ್ವದ ಭೌಮತೆಯನ್ನು ಸಾಕಾರ ಮಾಡಿಸಿಕೊಡುವಲ್ಲಿ, ಬದುಕೇ ಯಜ್ಞಶಾಲೆಯಾಗಿರುವುದನ್ನು ಅನುಭವಿಸುವುದಾಗಿದೆ. ಕನ್ನಡ ಸಾಹಿತ್ಯದಲ್ಲಿಯ ಹರಿದಾಸರ ಕೀರ್ತನೆಗಳೂ ಇದೇ ಸ್ಥಳದ ಭೌಮತೆಯನ್ನು ಪಡೆದಿವೆ. ಈ ದೃಷ್ಟಿಯಿಂದ ಕನಕದಾಸರ ಕೀರ್ತನೆಗಳ ಅಭ್ಯಾಸವು ಅಂತರಂಗದ ಚೆಲುವನ್ನು ಹೆಚ್ಚಿಸಿ ಪ್ರಪಂಚಜ್ಞಾನದ ಮಹತಿಯಲ್ಲಿಯೇ ಅಲೌಕಿಕವಾದ ಪರಾತ್ಪರ ಶಕ್ತಿಯನ್ನು ತೋರಿಸುವುದರ ಕಡೆಗೆ ಅತಿ ಮಹತ್ತ್ವದ ಹೆಜ್ಜೆಯನ್ನು ಇಡುತ್ತದೆ. ಏಕೆಂದರೆ ಕನಕದಾಸರು ತತ್ತ್ವವನ್ನು ತಿಳಿದ ಗದ್ಯ ಅನುಭಾವಿಗಳು. ಅಂತೆಯೇ ಸಕಲ ಶಾಸ್ತ್ರಾರ್ಥಗಳ ಧ್ವನಿಯೇ ಅವರಾಗಿದ್ದರು. ಮೇಲಾಗಿ ಅವರು ತಮ್ಮ ಕುಶಾಗ್ರಮತಿಯ ತಿಳಿವಳಿಕೆಯಿಂದ ತಿಳಿತಿಳಿಯಾಗಿ ಆಳವನ್ನು ತೋರಿಸುವ ಶಕ್ತಿಯಾಗಿದ್ದರು. ಬಹುಶಃ ಈ ಕಾರಣದಿಂದಲೇ ಇರಬೇಕು ವ್ಯಾಸತೀರ್ಥರಿಗೆ ಅಚ್ಚುಮೆಚ್ಚಿನ ಶಿಷ್ಯರಾಗಿದ್ದರು. ಕನಕದಾಸರ ಅನುಭವ ದೃಷ್ಟಿಯನ್ನು ನಿಶಿತಬುದ್ಧಿಯನ್ನೂ, ಅಲೌಕಿಕ ಜ್ಞಾನದ ತುತ್ತ ತುದಿಯನ್ನು ಒಂದಿನಿತಾದರೂ ತಿಳಿದುಕೊಳ್ಳಲು ಒಂದಾದರೂ ಘಟನೆಯನ್ನು, ನೆನೆಯಲೇಬೇಕು. ಒಂದು ದಿವಸ - ವ್ಯಾಸತೀರ್ಥರು ಅಂಗೈಯಲ್ಲಿ ಸಾಲಿಗ್ರಾಮವನ್ನು ಮುಚ್ಚಿಟ್ಟುಕೊಂಡು ಅವರು, "ನನ್ನ ಕೈಯಲ್ಲಿ ಏನಿದೆ ?" ಎಂದು ಕೇಳಿದಾಗ, ಬೇರೆ ಯಾವ ಶಿಷ್ಯರೂ ಉತ್ತರ ಕೊಡಲಿಲ್ಲ. ಆಗ ವ್ಯಾಸರ ದೃಷ್ಟಿ ಕನಕದಾಸರ ಮೇಲೆ ಬಿದ್ದಾಗ:

ಈತನೀಗ ವಾಸುದೇವನು ಲೋಕದೊಡೆಯ ||
ದಾಸಗೊಲಿದು ತೇರಸೇರಿ
ತೇಜಿ ಪಿಡಿದು ನಡೆಸಿದಾತ
ದನುಜೆಯಾಳ್ವನಣ್ಣನಯ್ಯನ
ಪಿತನ ಮುಂದೆ ಕೌರವೇಂದ್ರ
ನನುಜೆಯಾಳಿದವನ ಶಿರವ ಕತ್ತರಿಸುತ
ಅನುಜೆಯಾಳಿದವನ ಬೆಂಕಿ
ಮುಟ್ಟದಂತೆ ಕಾಯ್ದುರುಕ್ಮ
ನನುಜೆಯಾಳಿದವನ ಮೂರ್ತಿಯನ್ನು
ನೋಡಿರೋ

ವ್ಯೋಮಕೇಶನಿಪ್ಪದೆಸೆಯ ಆ ಮಹಿಮೆಯುಳ್ಳ
ಸಾಮಜವರಸೇರಿ ಬರುವ ಶಕ್ತಿಯ ನೀಕ್ಷಿಸಿ
ಪ್ರೇಮದಿಂದ ಉರವ ನೋಡಿ
ಡಿಂಗರಿಗನ ಕಾಯ್ದು ಸಾರ್ವ
ಭೌಮ ಬಾಡದಾದಿಕೇಶವನ್ನ ನೋಡಿರೋ

-ಎಂದು ಕನಕದಾಸರು, ಗುರುಗಳು ಅಂಗೈಯಲ್ಲಿ ಮುಚ್ಚಿ ಹಿಡಿದಿದ್ದ ವಾಸುದೇವ ಪ್ರತೀಕ ಸಾಲಿಗ್ರಾಮವನ್ನು ಕುರಿತು, ದಿವ್ಯಜ್ಞಾನಿಯಾಗಿ ಕೀರ್ತನೆಯನ್ನು ಹಾಡಿದ ಪ್ರಸಂಗವು ಇಂದಿಗೂ ಕನಕದಾಸರ ಮಹತಿಯನ್ನು ಸಾರುವ ದೃಷ್ಟಾಂತವಾಗಿ ನಿಂತಿದೆ. ಇದೇ ರೀತಿ ಯಾರೂ ಇಲ್ಲದ ಸ್ಥಳವೇ ಇಲ್ಲ (ಪರಮಾತ್ಮನು ಎಲ್ಲೆಡೆ ಇರುವನೆಂಬುದಕ್ಕೆ) ಎಂಬುದಕ್ಕೆ ಬಾಳೇಹಣ್ಣು ತಿನ್ನದ, ನಾನು ಹೋದರೆ ಸ್ವರ್ಗಕ್ಕೆ ಹೋಗಬಹುದೆಂದು ಸಾರಿದ ಪ್ರಸಂಗವಾಗಲೀ - ಈ ಸಂದರ್ಭದಲ್ಲಿ ನೆನೆಯಬೇಕು. ಏಕೆಂದರೆ ಈ ಪ್ರಸಂಗಗಳಲ್ಲಿ ಕನಕರ ದಿವ್ಯದೃಷ್ಟಿಗೋಚರವಾಗುತ್ತದೆ. ಮತ್ತು ಅವರ ನಿಶಿತಮತಿಗೆ ನಮೋ ನಮೋ ಎನ್ನಲೇಬೇಕಾಗುತ್ತದೆ.

ಕನಕದಾಸರು ಕ್ರಿ.ಶ. ೧೫೦೮ ರಿಂದ ೧೬೦೬ ರವರೆಗೆ ಸುಮಾರು ೯೮ ವರ್ಷಗಳ ಕಾಲ ಬಾಳಿಬದುಕಿದ ತುಂಬುಜೀವನದ ಅನುಭಾವಕವಿ. ಅವರು ಅನೇಕ ಕಾವ್ಯಕೃತಿಗಳನ್ನು ರಚನೆ ಮಾಡಿರುವುದರ ಜೊತೆಗೆ, ತಮ್ಮ ಜೀವನಾನುಭವ ದರ್ಶನವನ್ನು ನೀಡುವ ಅನೇಕ ಕೀರ್ತನೆಗಳನ್ನು ರಚನೆಮಾಡಿದ್ದಾರೆ. ಈ ಕೀರ್ತನೆಗಳು ಸಂದರ್ಭಾನುಸಾರ ಪ್ರೇರಣೆ ಪಡೆದು ಬಂದು, ಸಾರ್ವಕಾಲಿಕವಾಗಿ ಅನುಸಂಧಾನದಲ್ಲಿ ಬೆಳಕು ನೀಡಬಲ್ಲ ಶಕ್ತಿಯನ್ನು ಪಡೆದಿವೆ. ಆ ಕೀರ್ತನೆಗಳನ್ನು, ಸಾಹಿತ್ಯಾರಾಧಕರು ಭಕ್ತಿ ವಿಶ್ವಾಸಗಳಿಂದ ಸಂಗ್ರಹಿಸಿ ಉಳಿಸಿಕೊಂಡು ಬಂದಿದ್ದಾರೆ. ಸುದೋಧದ ಪ್ರತಿಯಲ್ಲಿ ೮೫ ಕೀರ್ತನೆಗ

ಳಿದ್ದರೆ, ಉಡುಪಿಯ ಪಾವಂಜೆ ಪ್ರತಿಯಲ್ಲಿ ೨೨೫ ಇವೆ. ಬೆಟಗೇರಿ ಕೃಷ್ಣಶರ್ಮರ ಪ್ರತಿಯಲ್ಲಿ ೧೭೫ ಇವೆ. ಬಿ. ಶಿವಮೂರ್ತಿಶಾಸ್ತ್ರಿ ಮತ್ತು ಕೆ. ಎಂ. ಕೃಷ್ಣರಾಯರು ಸಂಪಾದಿತ ಕೃತಿಯಲ್ಲಿ ೨೪೯ ಇವೆ. ಈ ಎಲ್ಲ ಕೀರ್ತನೆಗಳನ್ನು ಮತ್ತೊಮ್ಮೆ ಪರಿಷ್ಕರಿಸಿ, ವಿವಾದಾತ್ಮಕ ಕೀರ್ತನೆಗಳನ್ನು ಪರಿಶಿಷ್ಟದಲ್ಲಿ ಕೊಟ್ಟು, ಮೌಲಿಕ ಸಂಗ್ರಹವನ್ನಾಗಿಸಿ ಸಾಹಿತ್ಯಲೋಕಕ್ಕೆ ನೀಡಬೇಕು.

ಕನಕದಾಸರ ಕೀರ್ತನೆಗಳನ್ನೆಲ್ಲ ಪರಿಶೀಲಿಸಿದಾಗ, ಅವರ ಜೀವನದಲ್ಲಿಯ ಕ್ರಿಯಾಶೀಲ ತಪಸ್ಸಿನ ಫಲವೆಲ್ಲ ಕೀರ್ತನೆಗಳಾಗಿ ಲೋಕದ ನಾಡಿಯನ್ನೇ ಮಿಡಿಸಿವೆಯೆಂಬುದನ್ನು ಒತ್ತಿ ಹೇಳಲೇಬೇಕು. ಈ ಎಲ್ಲ ಕೀರ್ತನೆಗಳನ್ನು ಸ್ಥೂಲವಾಗಿ ಆತ್ಮಪರಿಶೀಲನೆ, ಆತ್ಮನಿವೇದನೆ ಮತ್ತು ಸಮಾಜದ ಕಲ್ಪನೆ ಎಂದು ವಿಭಾಗ ಮಾಡಬೇಕೆನ್ನಿಸುತ್ತದೆ. ಈ ಮುನ್ನ ಪರಿಶೀಲಿಸಿದ ಪ್ರಕಾರ ಕನಕದಾಸರು ತಮ್ಮ ತುಂಬು ಜೀವನದಲ್ಲಿ ತಮ್ಮನ್ನೇ ತಾವು ಪರಿಶೀಲಿಸಿಕೊಂಡು ಧೈರ್ಯದ ನಿಧಿಯಾಗಿದ್ದಾರೆ. ಇದು ಸಾಧಕನು ಸಾಧಿಸಿದ ಮೊದಲ ಮೆಟ್ಟಿಲು. ಅನಂತರ ಸಾಧನೆಯ ವೇಗದಲ್ಲಿ ಅಂತಃ ಸತ್ತ್ವ ಬೆಳೆಯತೊಡಗುತ್ತದೆ. ಹಾಗೆ ಅಂತಃ ಸತ್ತ್ವ ಬೆಳೆದಂತೆಲ್ಲ, ದಾಸರು ಮನಗಂಡದ್ದನ್ನೆಲ್ಲ ಸೋಸಿ ಹೇಳಲು ಆರಂಭಿಸುತ್ತಾರೆ. ಅಂತಹ ಮಾತುಗಳೇ ಚೈತನ್ಯಮಯ ಜೀವನವನ್ನು ಸಾಧಿಸಲು, ಇಂದಿಗೂ ಜೀವಸಂಹಿತೆಗಳಾಗಿವೆ :

ಲೋಕದೊಳಗೆನ್ನನ್ನು ಪೋಲ್ವ ಪಾಪಿಗಳನ್ನು
ನೀ ಕಂಡು ಬಲ್ಲೆಯಾ ಕೃಷ್ಣಾ

ಎಂಬ ಕನಕದಾಸರ ಕೊರಗಿಗೆ, ನಿಶ್ಚಿತ ಸಮಾಧಾನವು ದೊರೆಯದೇ ಇದ್ದಾಗ ಮನಸ್ಸನ್ನು ಬಿಗಿ ಹಿಡಿಯದೇಕೆಂಬ ತಿಳಿವಳಿಕೆಯು ಜಾಗೃತವಾಗುತ್ತದೆ. ಆದ್ದರಿಂದ ಮನ್ಮಥನನ್ನು ಗೆಲ್ಲಬೇಕು. ಆತನನ್ನು ಗೆಲ್ಲಬೇಕೆಂದು ಎಷ್ಟು ನಿರ್ಧಾರ ಮಾಡಿದರೂ ಮನ್ಮಥನು ಯಾವುದಾದರೂ ಕ್ರಮದಿಂದ ದಾರಿ ತಪ್ಪಿಸಲು ಪ್ರಯತ್ನಿಸುತ್ತಾನೆ. ಅಂತಹ ಸಂದರ್ಭದಲ್ಲಿ ಹಳಹಳಿಪಟ್ಟು ಪಶ್ಚಾತ್ತಾಪದಿಂದ ಹೇಳಿದ ಕೀರ್ತನೆಯು ಇಂದಿಗೂ ಸತ್ತ್ವದ ಸಂಜೀವಿನಿ :

ಪಥ ನಡೆಯದಯ್ಯ ಪರಲೋಕಕ್ಕೈದುವಡೆ ಮ
ನ್ಮಥನೆಂಬ ಖಳನು ಮಾರ್ಗವ
ಕಟ್ಟಿಸುಲಿಯುತಿರೆ
ಗಿಳಿನವಿಲು ಕೋಗಿಲೆ ವಸಂತ ಭ್ರಮರಂಗಳ
ಬಲದೊಡನೆ ಮದನ ಮಾರ್ಗವ ಕಟ್ಟಲು
ಬಲುಹುಳ್ಳ ಭಕ್ತಮುನಿ ಸಂನ್ಯಾಸಿ ಯೋಗಿಗಳು
ಸುಲಿಸಿಕೊಂಡರು ಕೆಲರು ಸಿಕ್ಕಿದರು ಸೆರೆಯ

ಎಂದು ಹೇಳುವಾಗ ಶ್ರೀ ಸಾಮಾನ್ಯನ ಗತಿ ಹೇಗೆ? ಅದಕ್ಕೆ ದಾರಿಯೆಂದರೆ,

ಕಾಳೆಗದೊಳೆದುರಿಲ್ಲ ಸುರವೃಂದದೊಳಗೆ ಕ-
ಟ್ಟಾಳು ಮನ್ಮಥನು ಈ ಚಲದಂಕ ಬಿರುದು
ಪೇಳಲೆನ್ನಳವೆ ಬಾಡದಾದಿಕೇಶವನೊಲವಿ
ನಾಳು ಸಂಗಡ ಬರಲು ಅವ ಭಯವಿಲ್ಲ

ಎಂಬುದು, ಆದ್ದರಿಂದ ಪೂರ್ಣಸ್ವರೂಪಿ ಪರಮಾತ್ಮನನ್ನು ಕಣ್ಣನಗಳ ಮುಂದೆ ಸದಾ ನಿಲ್ಲಿಸಿಕೊಂಡಿದ್ದರೆ, ದುಷ್ಟಭಾವನೆಗಳು ದೂರ ಸರಿಯುತ್ತಹೋಗುತ್ತವೆ. ಕೊನೆಯಲ್ಲಿ ಅಪ್ಪಟ ಬೆಳಕು ಮನವನ್ನು ಕೋರೈಸುತ್ತದೆ. ಆಗ ಮನ್ಮಥನು ಆತ್ಮನು ಹೇಳಿದಂತೆ ಕೇಳುತ್ತಾನೆ.

ಸತ್ಯಾಸತ್ಯವ್ಯವಹಾರಿಗಳು ಈ ದೇಹವನ್ನೇ ಶಾಶ್ವತವೆಂದು ತಿಳಿದಿರುತ್ತಾರೆ. ತಾವು ಆಡುವ ಮಾತು, ನಡೆಯುವ ಕತೆ ಎಲ್ಲದರಲ್ಲಿಯೂ ತಮ್ಮದೇ ಕೊಂಬು ತೋರುತ್ತಾರೆ. ಆಗ ವಿವೇಕ ಹೇಸುತ್ತದೆ. ಮಿತಿಮೀರಿದಾಗ ಬೇಸತ್ತು ಎಚ್ಚರಿಸುವ ಮಾತುಗಳು ಕನಕದಾಸರ ಶಾಸ್ತ್ರಜ್ಞಾನ ಮತ್ತು





ಕಾರ್ವೇಟಿ ನಗರದ ಶ್ರೀ ವೇಣುಗೋಪಾಲಸ್ವಾಮಿ ಬ್ರಹ್ಮೋತ್ಸವಗಳು ಇತ್ತೀಚೆಗೆ ನಡೆದವು. ಅದರ ಎರಡು ಚಿತ್ರಗಳನ್ನಿಲ್ಲಿ ಸಾದರಪಡಿಸಲಾಗಿದೆ.

# ತಿರುಪತಿ ರೈಲುಗಳ ಆಗಮನ ನಿರ್ಗಮನಗಳು

ತಿರುಪತಿಗೆ ಬರುವ ಹಾಗೂ ತಿರುಪತಿಯಿಂದ ಹೊರಡುವ ರೈಲುಗಳ ಬ್ರಾಡ್‌ಗೇಜ್ ಹಾಗೂ ಮೀಟರ್‌ಗೇಜ್ ರೈಲುಗಳ ವಿವರಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ. ಪಾಠಕ ಯಾತ್ರಿಕರು ಗಮನಿಸಿ ತಮ್ಮ ಪ್ರಯಾಣವನ್ನು ಸುಖಕರ ಮಾಡಿಕೊಳ್ಳಬೇಕೆಂದು ಕೋರಲಾಗಿದೆ.

| ರೈಲು ವಿವರ | ತಿರುಪತಿ ಸೇರುವ ವೇಳೆ | ತಿರುಪತಿ ಬಿಡುವ ವೇಳೆ |
|---|---|---|
| | ಬ್ರಾಡ್‌ಗೇಜ್ | |
| ಕಾಕಿನಾಡ (ಪ್ಯಾಸೆಂಜರ್) | ಬೆಳಗ್ಗೆ 3-15 ಗಂಟೆಗೆ | ರಾತ್ರಿ 23-30 ಗಂಟೆಗೆ |
| ಮೈಸೂರು (ಪ್ಯಾಸೆಂಜರ್) | ಬೆಳಗ್ಗೆ 4-00 ಗಂಟೆಗೆ | ರಾತ್ರಿ 22-00 ಗಂಟೆಗೆ |
| ಸಿಕಂದರಾಬಾದ್ (ನಾರಾಯಣಾದ್ರಿ ಎಕ್ಸ್‌ಪ್ರೆಸ್) | ಬೆಳಗ್ಗೆ 6-25 ಗಂಟೆಗೆ | ಸಂಜೆ 18-30 ಗಂಟೆಗೆ |
| ವಿಶಾಖಪಟ್ನಂ (ತಿರುಮಲ ಎಕ್ಸ್‌ಪ್ರೆಸ್) | ಬೆಳಗ್ಗೆ 7-35 ಗಂಟೆಗೆ | ರಾತ್ರಿ 19-00 ಗಂಟೆಗೆ |
| ಹೈದರಾಬಾದು (ರಾಯಲಸೀಮೆ ಎಕ್ಸ್‌ಪ್ರೆಸ್) | ಬೆಳಗ್ಗೆ 9-05 ಗಂಟೆಗೆ | ಸಂಜೆ 15-30 ಗಂಟೆಗೆ |
| ಮದ್ರಾಸು (ಸಪ್ತಗಿರಿ ಎಕ್ಸ್‌ಪ್ರೆಸ್) | ಬೆಳಗ್ಗೆ 9-30 ಗಂಟೆಗೆ | ಬೆಳಗ್ಗೆ 10-05 ಗಂಟೆಗೆ |
| ಒಂಗೋಲು (ಪ್ಯಾಸಿಂಜರ್) | ಮಧ್ಯಾಹ್ನ 12-00 ಗಂಟೆಗೆ | ಮಧ್ಯಾಹ್ನ 14-15 ಗಂಟೆಗೆ |
| ಕೊಚ್ಚಿನ್ - ವಾರಣಾಸಿ (ವಾರಣಾಸಿ ಎಕ್ಸ್‌ಪ್ರೆಸ್) (ತಿರುಪತಿಯ ಮೂಲಕ ಮಂಗಳವಾರಗಳಲ್ಲಿ) | ಮಧ್ಯಾಹ್ನ 13-15 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ (ಮಂಗಳವಾರ) |
| ವಾರಣಾಸಿ - ಕೊಚ್ಚಿನ್ (ಕೊಚ್ಚಿನ್ ಎಕ್ಸ್‌ಪ್ರೆಸ್) (ತಿರುಪತಿ ಮೂಲಕ ಭಾನುವಾರಗಳಲ್ಲಿ) | ಮಧ್ಯಾಹ್ನ 13-15 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ (ಭಾನುವಾರ) |
| ವಾರಣಾಸಿ - ತಿರುಪತಿ (ವಾರಣಾಸಿ ಎಕ್ಸ್‌ಪ್ರೆಸ್) ಮಂಗಳವಾರ - ಭಾನುವಾರಗಳಲ್ಲಿ | ಮಧ್ಯಾಹ್ನ 13-20 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ |
| ಪೂರಿ - ತಿರುಪತಿ (ಪೂರಿ ಎಕ್ಸ್‌ಪ್ರೆಸ್) ಬುಧ - ಶುಕ್ರವಾರಗಳಲ್ಲಿ | ಮಧ್ಯಾಹ್ನ 13-25 ಗಂಟೆಗೆ | ಬೆಳಗ್ಗೆ 9-45 ಗಂಟೆಗೆ |
| ಮದರಾಸು - ತಿರುಪತಿ (ಸಪ್ತಗಿರಿ ಎಕ್ಸ್‌ಪ್ರೆಸ್) | ಮಧ್ಯಾಹ್ನ 16-50 ಗಂಟೆಗೆ | ಸಂಜೆ 17-30 ಗಂಟೆಗೆ |
| ತಿರುಪತಿ - ಕಡಪ (ಇಂಟರ್‌ಸಿಟಿ ಎಕ್ಸ್‌ಪ್ರೆಸ್) | ರಾತ್ರಿ 20-15 ಗಂಟೆಗೆ | ಬೆಳಗ್ಗೆ 6-30 ಗಂಟೆಗೆ |
| ತಿರುಪತಿ - ಗೂಡೂರು (ಗೂಡೂರು ಪ್ಯಾಸೆಂಜರ್) | ರಾತ್ರಿ 20-30 ಗಂಟೆಗೆ | ಬೆಳಗ್ಗೆ 6-25 ಗಂಟೆಗೆ |
| ಹೈದರಾಬಾದು (ಕೃಷ್ಣಾ ಎಕ್ಸ್‌ಪ್ರೆಸ್) | ರಾತ್ರಿ 21-30 ಗಂಟೆಗೆ | ಬೆಳಗ್ಗೆ 5-30 ಗಂಟೆಗೆ |
| ಅರಕೋಣಂ ಅರಕೋಣಂ ಪ್ಯಾಸೆಂಜರ್ | ರಾತ್ರಿ 23-15 ಗಂಟೆಗೆ | ಬೆಳಗ್ಗೆ 4-05 ಗಂಟೆಗೆ |
| | ಮೀಟರ್ ಗೇಜ್ ರೈಲುಗಳು | |
| ಮಧುರೆ (ಮೀನಾಕ್ಷಿ ಎಕ್ಸ್‌ಪ್ರೆಸ್) | ಬೆಳಗ್ಗೆ 4-50 ಗಂಟೆಗೆ | ಮಧ್ಯಾಹ್ನ 15-40 ಗಂಟೆಗೆ |
| ಗುಂತಕಲ್ (ಗುಂತಕಲ್ ಪ್ಯಾಸೆಂಜರ್) | ಬೆಳಗ್ಗೆ 5-15 ಗಂಟೆಗೆ | ಬೆಳಗ್ಗೆ 6-00 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಬೆಳಗ್ಗೆ 8-55 ಗಂಟೆಗೆ | ಬೆಳಗ್ಗೆ 10-30 ಗಂಟೆಗೆ |
| ಮಹಬೂಬ್ ನಗರ್ (ವೆಂಕಟಾದ್ರಿ ಎಕ್ಸ್‌ಪ್ರೆಸ್) | ಬೆಳಗ್ಗೆ 9-30 ಗಂಟೆಗೆ | ಬೆಳಗ್ಗೆ 14-40 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಬೆಳಗ್ಗೆ 11-25 ಗಂಟೆಗೆ | ಸಂಜೆ 17-30 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಮಧ್ಯಾಹ್ನ 14-35 ಗಂಟೆಗೆ | ಬೆಳಗ್ಗೆ 7-00 ಗಂಟೆಗೆ |
| ಗುಂತಕಲ್ (ಗುಂತಕಲ್) | ಸಂಜೆ 18-45 ಗಂಟೆಗೆ | ರಾತ್ರಿ 21-45 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಸಂಜೆ 19-45 ಗಂಟೆಗೆ | ಬೆಳಗ್ಗೆ 2-45 ಗಂಟೆಗೆ |

ಪ್ರಪಂಚಜ್ಞಾನಗಳ ಕ್ಷಿತಿಜಗಳತ್ತ ದೃಷ್ಟಿ ಹಾಕಲು ಚೇತಾವಣಿ ನೀಡುತ್ತವೆ :

ಈ ದೇಹವನ್ನು ಕುರಿತು :

ಎಂದಿದ್ದರೀ ಕೊಂಪೆ ಎನಗೆ ನಂಬಿಕೆಯಿರದು
ಮುಂದರಿತು ಹರಿಪಾದ ಹೊಂದುವುದು ಲೇಸು
ಎಲುವುಗಳು ತೊಲೆ ಜಂತೆ ನರಗಳವು ಬಿಗಿದಂತೆ

ಬಲಿದ ಚರ್ಮವು ಮೇಲು ಹೊದಿಕೆಯಂತೆ
ಗಳಗಳನೆ ನುಡಿದ ನಾಲಿಗೆ ಗಂಟೆ ಉಲಿಯಂತೆ
ಕಿಲಕಾಲಕೀ ಕೊಂಪೆ ಕಡೆಗಾಹಿದಂತೆ
ಕಂಡಿಗಳು ಒಂಬತ್ತು ಕಳಬಂಟರೈವರು
ಅಂಡಲೆಯುವುದೊತ್ತಿನಲಿ ಷಡ್ವರ್ಗವು
ಮಂಡಲಕೆ ಹೊಸಪರಿಯು
ಮನ್ಮಥನ ಠಾಣ್ಯವಿದು
ಮಂಡೆ ಹೋಗುವುದನ್ನು ಅರಿಯದೀ ಕೊಂಪೆ
ಕೊಂಪೆಯಲಿ ಶೃಂಗಾರ ಕೊಂಡಾಡಲಳವಲ್ಲ
ಕೆಂಪು ಬಣ್ಣಗಳಿಂದ ಚೆನ್ನಾಯಿತು
ಇಂಪಿನಲಿ ಕಾಗಿ ನೆಲೆಯಾದಿ ಕೇಶವನನ್ನು
ಸೊಂಪಿನಲಿ ನೆನೆ ನೆನೆದು
ಸುಖಿಯಾಗೋಮನುಜಾ

ಮನಸ್ಸಿನ ರೀತಿಯನ್ನು ಕುರಿತು :

ಧರ್ಮೇಂದ್ರಿಯಕ್ಕೆ ದಟ್ಟಡಿಯ ನಿಡಲೊಲ್ಲೆದು
ಷರ್ಮೇಂದ್ರಿಯಕೆ ಕಾಲ ಕೆದರುತಿಹೆ ಮರುಳೆ

ಹೊರಗಿನ ಡಂಭವನ್ನು ಒಪ್ಪದ ತನ್ನ ಅಂತರಂಗವನ್ನು ಕುರಿತು :

ಎಳ್ಳು ಕಾಳಿನಷ್ಟು ಭಕುತಿಯೆನ್ನೊಳಗಿಲ್ಲ
ಕಳ್ಳರಿಗೆ ಕಳ್ಳನಂತೆ ಬೆಳ್ಳಕ್ಕಿಯಂದೆದಿ ಡಂಭ
ಗಂಡು ಮುಣುಗಿನ ಹಕ್ಕಿಯಂತೆ
ಕಂಡ ಕಂಡ ನೀರು ಮುಳುಗಿ
ಮಂಡೆಶೂಲೆ ಬಾಹುದೈಸೆ ಗತಿಯ ಕಾಣೆನೊ
ಮಂಡುಕನಂದದಿ ಕೆರೆಯ
ದಂಡೆಯಲ್ಲಿ ಕುಳಿತುಕೊಂಡು
ಮಂಡೆ ಮುಸುಕನಿಟ್ಟು
ಮೂಗ ಹಿಡಿವ ಭ್ರಮಿತ ನಾನಯ್ಯ

ಇಕ್ಕುಳವ ಕೈಯಲ್ಲಿ ಹಿಡಿದು
ಕಾದ.ಕಬ್ಬಿಣವನ್ನು ತೆಗೆಸಿ
ಹೊಕ್ಕು ಮುಂದಕೆ ಎಳಸಿ
ಹೊಮ್ಮುವ ಗತಿ ಕಾಣೊ
ಹೊಕ್ಕುಳ ಹೂವಿನ ಬಾಡದಾದಿಕೇಶವನ ಮೊರೆ
ಹೊಕ್ಕೆನಿಂದು ಕಾಯ್ದುಕೊಳ್ಳೊ ದೇವಾ

ಎಂಬ ಆತ್ಮ ವಿಮರ್ಶೆಯ ನಂತರ, ಹೃದಯವು ಆರ್ತನಾದವನ್ನು ಎಬ್ಬಿಸಿ,

"ಇಂಬಿಟ್ಟುಕೊಳು ಮುರಾರಿ",
"ನಳಿನಾಕ್ಷ ಕಾಯ್ದುಕೊಳ್ಳೊ"

-ಎಂದು ಮೊರೆ ಇಡತೊಡಗಿದಾಗ ಪಶ್ಚಾತ್ತಾಪದ ಹೊನಲು ಒಮ್ಮಿಂದೊಮ್ಮೆಗೆ ಒಳಗಿನ ದಿಗಂತವನ್ನು ತೋರಿಸಿ ಬಿಡುತ್ತದೆ. ಇದು ಆತ್ಮನಿವೇದನೆಯ ನಿಚ್ಚಳ ಪ್ರಭಾವ. ಆಗ,

ಇಷ್ಟುದಿನ ಈ ವೈಕುಂಠ
ಎಷ್ಟು ದೂರವೆನ್ನುತ್ತಿದ್ದೆ
ದೃಷ್ಟಿಯಿಂದ ನೋಡಿದೆ ನಾ
ಸೃಷ್ಟಿಗೀಶ ಶ್ರೀರಂಗಶಾಯಿ
ಎಂಟು ಏಳು ಕಳೆದುದರಿಂದ
ತುಂಟರೈವರ ತುಳಿದುದರಿಂದ
ಕಂಟಕನೊಬ್ಬನ ಕೊಲಿಸಿದುದರಿಂದ
ಬಂಟನಾಗಿ ಬಂದೆನೊ ಶ್ರೀರಂಗಶಾಯಿ

-ಯ ದರ್ಶನವಾಗುತ್ತದೆ. ಈ ದರ್ಶನ ಮಾಸುವ ದರ್ಶನವಲ್ಲ. ಖಾಯಂ ಬೆಳಕು ನೀಡುವ ದರ್ಶನ. ಈ ಬೆಳಕಿನಲ್ಲಿ ಕನಕದಾಸರು ತಮ್ಮ ಜೀವನಾನುಭವದ ಮೇಲೆ, ಸಮಾಜದಲ್ಲಿ ಶ್ರೀ ಸಾಮಾನ್ಯನ ಇರವಿಗೆ, ತಮ್ಮ ಇರವಿನ ತಿರುವಿಗೆ ಬರಲು ಪ್ರೇರಣೆ ನೀಡುತ್ತಾರೆ. ಅವನ ಜೀವನವನ್ನು ಸುಂದರಗೊಳಿಸಲು ಆಕರ್ಷಿಸುತ್ತಾರೆ. ಇದೆಲ್ಲ ತಮ್ಮ ನಡೆನುಡಿ ತೀರ್ಥದಿಂದ.

ಕನಕದಾಸರ ದೃಷ್ಟಿಯಲ್ಲಿ ಸಮಾಜವು, ಲೋಕದಲ್ಲಿ ಸುಶೀಲವಾಗಿ ನಡೆದು ಸದ್ಗತಿಯನ್ನು ಪಡೆಯಬೇಕೆಂಬುದೇ ಆಗಿದೆ. ಪ್ರಪಂಚವನ್ನು ಅರ್ಥಾತ್ ಸಂಸಾರವನ್ನು ಬಿಟ್ಟ ಸಂನ್ಯಾಸ ಹಿಡಿದರೆ ಬದುಕೇ ಅಲ್ಲ ಎನ್ನುತ್ತಾರೆ. ಹೌದು ಸಂಸಾರದಲ್ಲಿ ಹೇಸಿಕೆ ಇದೆ. ಆದರೆ ಆ ಹೇಸಿಕೆಯನ್ನು ತಗುಲಿಸಿಕೊಳ್ಳದಂತೆ ಚೊಕ್ಕಾಗಿ ಬದುಕಬೇಕು. ತನ್ನ ಶೀಲದ ಬಲದಿಂದ ಪರಿಸರವನ್ನು ಚೊಕ್ಕಟವಾಗಿಡಲು ಪ್ರಯತ್ನಿಸಬೇಕು. ಅದಕ್ಕಾಗಿ ತನ್ನ ಬಗ್ಗೆ ತಾನು ತಿಳಿದುಕೊಳ್ಳಬೇಕು. ಅದು ಸುಜೀವಿಯ ಲಕ್ಷಣ, ಅದನ್ನು ಕನಕದಾಸರು ಪ್ರಭಾವಿಯಾಗಿ ನಿವೇದಿಸುತ್ತಾರೆ.

ತಾನಾರು ದೇಹವಾರು - ದಿವ್ಯ
ಜ್ಞಾನದಲಿ ತಿಳಿದಾತ ಪರಮಯೋಗಿ
ಆಸ್ಥಿಪಂಜರದ ನರಗಳ ತೊಗಲ ಹೊದಿಕೆಯ
ವಿಸ್ತರಿಸಿ ಬಿಗಿದ ಮಾಂಸದ ದೊಂದೆಯು
ಮೂತ್ರ ಮಲರಕ್ತ ಕೀವದ
ಪ್ರಳಯದೊಡಲೆಂದು
ವಿಸ್ತರಿಸಿ ತಿಳಿದಾತ ಪರಮಯೋಗಿ
ಸೂತಕಾಬ್ಧಿಯಲಿ ನವಮಾಸ ತುಂಬಿರೆ ತನ್ನ
ಮಾತೆಯುದರದಿ ಬಂದು ಬೆರಸಿ ಬೆಳೆದು
ಪಾತಕವದೊಂದು ಮೂರುತಿಯಾದ
ತನುವೆಂದು
ನೀತಿಯಲಿ ತಿಳಿದಾತ ಪರಮಯೋಗಿ
ಘೋರ ಸಂಸಾರ ತನುವೆಂದು ತನ್ನಲಿ ತಿಳಿದು
ಗೇರು ಹಣ್ಣಿನ ಬೀಜದಂತೆ ಹೊರಟು
ಮಾರಪಿತ ಕಾಗಿನೆಲೆಯಾದಿ ಕೇಶವನ ಪಾದ
ವಾರಿಜವ ನಂಬಿದವ ಪರಮಯೋಗಿ

-ಈ ಲಕ್ಷಣಗಳನ್ನು ತಿಳಿದುಕೊಂಡು, ನಡೆದುಕೊಂಡರೆ ಸಮಾಜವೆಲ್ಲ ಪರಮಯೋಗಿತ್ವವನ್ನು ಪಡೆಯುತ್ತದೆ.

ಇಂತಹ ಪರಮಯೋಗಿಯು ತಾನು ಬೆಳೆದು ಬಂದ ಪರಿಸರಕ್ಕೆಲ್ಲ ಕೃತಜ್ಞತೆ ತೋರಬೇಕಾದುದು, ಆದ್ಯಕರ್ತವ್ಯ. ಅದನ್ನು ಕನಕದಾಸರು ಗೌರವದಿಂದ ಹೇಳುತ್ತಾರೆ.

ಹಲವು ಜನ್ಮದಿ ತಾಯಿ ಎನಗಿತ್ತ ಮೊಲೆಹಾಲು
ನಲಿದು ಉಂಡಾಗ ಹನಿ ನೆಲಕೆ ಬಿದ್ದುದು ಕೂಡಿ
ಅಳೆದು ನೋಡಿದರೆ ಕ್ಷೀರಾಂಬುಧಿಗೆ ಇಮ್ಮಿಗಿಲು
ಬಳಿಕಳುವ ನಯನ ಜಲವು
ತಿಳಿದು ನೋಡಿದರೆ
ಲವಣಾರ್ಣವಕೆ ಮೂರು ಮಡಿ
ಎಲುವು ನರಗಳು ಕೂಡಿ
ಮೇರುವಿಗೆ ನಾಲ್ಕು ಮಡಿ
ಸುಲಿದು ಚರ್ಮದ ಹಾಸಿದರೆ
ಭೂಮಿಗೈದು ಮಡಿ ನೆಲೆಯಾವುದೀ ದೇಹಕೆ?

ಎಂದರೆ, "ಹಿಂದೆ ಕಾಯ್ದವರಾರು ಮುಂದೆ ಕೊಲ್ಲುವರಾರು". ಈ ದಂದುಗವ ತಿಳಿದವನು ಸಿರಿ ಕಾಗಿನೆಲೆಯಾದಿ ಕೇಶವ ಮಾತ್ರ. ಅದಕ್ಕಾಗಿ ಆತನ ಪದದ್ವಂದ್ವವನ್ನು ಹಿಡಿದರೆ, ಅರ್ಥಾತ್ ನಂಬಿದರೆ ಭವಪಾಶನೀಗಲು ಸಾಧ್ಯವಾಗುತ್ತದೆ. ಈ ಸಾಧನೆಗೆ, "ದಾಸ" ನಾಗಬೇಕು ಎನ್ನುತ್ತಾರೆ. ಏಕೆಂದರೆ ಈ ಸಂಸಾರವು ಅತ್ತಲೋ, ಇತ್ತಲೋ, ಕತ್ತಲೋ, ಬತ್ತಲೋ : ಬತ್ತಲೆ ಬತ್ತಲೆ ನಿತ್ಯವಲ್ಲ. ಅದಕ್ಕಾಗಿ ನಾಯಬಾಯ ಅರಿವೆಯಂತೆ ನಾನಾ ಕೋಟಲೆಗಳಲ್ಲಿ ಬಿದ್ದು ಬಾಯಿ ಬಿಡುವುದು ಸರಿಯಲ್ಲ. ಆದ್ದರಿಂದ, "ವಾಸುದೇವನೆಂಬ ಒಳಗಿದ್ದ ಹಂಸನ ಸೇರಿ ಲೇಸನುಂಡು ಮೋಸಗೊಳದೆ ಮುಕ್ತನಾಗದೇಕು, ಶಕ್ತನಾಗಬೇಕು". ಕಾಶಿ, ವಾರಣಾಸಿ, ಕಂಚಿ, ಕಾಳಹಸ್ತಿ, ರಾಮೇಶ್ವರ ಏಸು ದೇಶ ತಿರು

ಗಿದರೂ ಪ್ರವಾಸವಾಗುತ್ತದೆ ವಿನಾ ಭವಪಾಶ ನೀಗಲಾರದು. ಅದಕ್ಕಾಗಿ ಕನಕದಾಸರು, ಸಾವು ಮುಟ್ಟದ ಮುನ್ನ ಆರೋಗ್ಯವಿರುವಾಗಲೇ ದಾಸನಾಗಿ, "ಹರಿಯ ಸೇವೆಯ ಮಾಡು; ಪರಲೋಕ ಸಾಧನವ ಮಾಡು" ಎನ್ನುತ್ತಾರೆ. ಭೇದವಿಲ್ಲದೆ ಸಕಲ ಜೀವರನ್ನು ಮೊತ್ತ ಭೂದೇವಿಯನ್ನು ಗೌರವಿಸು ಎನ್ನುತ್ತಾರೆ. ಹೀಗೆ ದಾಸತ್ವದ ದೀಕ್ಷೆಯನ್ನು ಪಡೆದವನು ಆಸೆ ಬಿಡಬೇಕು. ದಾನ ಮಾಡಬೇಕು. ಸಕಲ ಸಂಪತ್ತನ್ನು ಶ್ರೀ ತುಲಸಿಯರಂಗಗೆ ಅರ್ಪಿಸಬೇಕು. ಉದರ ಪೋಷಣೆಗಾಗಿ ದಾಸವೇಷ ಸರಿಯಲ್ಲ. ಅಂತಹ ದಾಸನು :

ದುಂಡ ನಾಮವ ಬರೆದು ಭಂಡತನದಿ ಜಗದಿ
ದಂಡಿಗೆ ಬೆತ್ತ ಪಿಡಿವನು ಹೆಂಡಿರ ಕಾಯ್ವನು
ಪಕ್ಷಿವಾಹನನ ಗುಣಲೆಕ್ಕಿಸಿ ಪೊಗಳದೆ
ದೆಕ್ಕಸಬೆರಗಾಗಿ ಅಕ್ಕಿಗೆ ತಿರುಗುವ
ಭೋಗಿಶಯನನ ಪಾದ ರಾಗದಿ ಭಜಿಸದೆ
ಕಾಗಿನೆಲೆಯಾದಿ ಕೇಶವನ ದಾಸ ನೀನೆ

ಎಂದು ಕಟುವಾಗಿ ಹೇಳಿ ಅಂತಹರನ್ನು ತಿದ್ದುವ ಉದ್ದೇಶವನ್ನು ತಾಳಿದ್ದಾರೆ.

ಕನಕದಾಸರು ರೂಪಿಸಿದ ಸಂಸಾರದ ಕ್ರಮವನ್ನು ಅಂಗೀಕರಿಸಿ, ದಾಸನಾಗಿ, ಪರಮಯೋಗಿಯಾಗಿ ಬಾಳುವವನು ತನ್ನನ್ನು ರಕ್ಷಿಸಿಕೊಳ್ಳಲು ಮತ್ತು ಸಮಾಜವನ್ನು ರಕ್ಷಿಸಲು ತನ್ನ ಜೀವನದಲ್ಲಿ ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಆ ನಿಯಮಗಳಲ್ಲಿ ಲೌಕಿಕ ಸತ್ವವು ಅಡಗಿದೆ. ಅಷ್ಟೇ ಅಲ್ಲ; ಆ ನಡೆಯಲ್ಲಿ ಮುಮುಕ್ಷು ಪಡೆಯಬೇಕಾದ ಗುಣಗೌರವಗಳೂ ಅಡಕವಾಗಿವೆ. ನಿರ್ಮಲವಾದ ಪರಿಸರವು ನಿರ್ಮಾಣವಾದಂತೆ ಆ ಗುಣ ಗೌರವಗಳೂ ಸ್ಫುಟವಾಗತೊಡಗಿ ಆ ಅನುಕರಣೀಯವಾಗುತ್ತವೆ. ಅವುಗಳಲ್ಲಿ ಪ್ರಮುಖವಾದುವುಗಳನ್ನು ಇಲ್ಲಿ ಗುರುತಿಸಬಹುದು.

೧. ಹಾವ ಹಿಡಿಯಲು ಬಹುದು. ಹರಣ ನೀಡಲುಬಹುದು. ಮಾವನ ಮನೆಯೊಳಗೆ ಕೋವಿದರು ಇರಬಹುದೆ?

೨. ದಾನಧರ್ಮ ಮಾಡಿ ಬಹು ನಿಧಾನಿಯೆನಿಸಿಕೊಳ್ಳೋ ಮನುಜ.

೩. ಸತ್ಯವಂತರ ಸಂಗವಿರಲು ತೀರ್ಥವೇತಕೆ?

೪. ತನ್ನ ಪ್ರಾಪ್ತಿಯ ಫಲವ ತಾನರಿಯದೆ ಅನ್ಯರಿಗೆ ಆಡುವುದು ಅವಗುಣವು ಮರುಳೆ.

೫. ಸಮಯಕ್ಕೊದಗದ ಅರ್ಥಸಾವಿರದ್ದರೂ ವ್ಯರ್ಥ, ಸವತಿಯೊಳಗಣ ಕೂಟ ಎಳೆನಾಗರ ಕೂಟ.

೬. ಗುಟ್ಟಿನಲ್ಲಿ ಗೋಪಾಲನ ಸ್ಮರಿಸೊ.

ಈ ಎಲ್ಲ ನಿಯಮಗಳನ್ನು ಪಾಲಿಸುತ್ತ, ಪರಿಸರವನ್ನು ನಿರ್ಮಲಗೊಳಿಸುತ್ತ, ಮಾನವಧರ್ಮವನ್ನು ಬಾಳಬೇಕೆನ್ನುತ್ತಾರೆ. ಇಂತಹರಿಗೆ ಜಾತಿ ಮತ ಪಂಥಗಳೇ ಇರುವುದಿಲ್ಲ. ಅವರಿಗೆ ಸದಾಚಾರ ಮುಖ್ಯ, ಶೀಲ ಮುಖ್ಯ. ಅದಕ್ಕಾಗಿ ದಾಸರ ಸಂಕಲ್ಪದ ರೀತಿಯನ್ನು ನೋಡಿ ಸೋಗಿನ ಜನರು ಬೆರಳು ಕಚ್ಚಬೇಕು.

ಕಾಲಕರ್ಮದೊಳುಪೇಕ್ಷೆಯ ಮಾಡಿ
ಹರಿಭಕುತಿ
ಶೀಲರಹಿತ ಬ್ರಾಹ್ಮಣನಾಗಲೊಲ್ಲೆ
ಮೇಲನರಿತು ವಿಷ್ಣುಭಕುತಿಯ ಮಾಳ್ಪ ಚಾಂ
ಡಾಲರ ಮನೆಯ ಬಾಗಿಲ ಕಾಯಿಸೆನ್ನನು

ಎಂಬ ದೊಡ್ಡ ಮನಸ್ಸು ಬಹು ಜನಕ್ಕೆ ಕಡಮೆ. ಅದು ಕನಕ ಶಕ್ತಿ ಪಡೆದವರಿಗೆ ಮಾತ್ರ ಸಾಧ್ಯ. ಇಂತಹರು ಕುಲವಿಲ್ಲದ ದಾಸರು. ಸತ್ಯ ಸುಜನರಿಗೆ ಕುಲವೇ ಇಲ್ಲ. ಆದರೆ ಕುಲ ಕುಲವೆಂದು ಹೋರಾಡುವ ಜನರಿಗೆ ಕನಕದಾಸರು :

ಆತ್ಮನಾವಕುಲ ಜೀವನಾವಕುಲ
ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮನು ಕಾಗಿನೆಲೆಯಾದಿ ಕೇಶವನೊಲಿದ
ಭಕ್ತರಿಗೆ ಕುಲವಾವುದು ಹೇಳಿರಯ್ಯ

ಎಂದು ಪ್ರಶ್ನೆ ಮಾಡಿ, ಅವರಲ್ಲಿ ಕುಲದ ಬಗ್ಗೆ ಇರುವ ಭ್ರಮೆಯನ್ನು ನಿರಸನ ಮಾಡಿ, "ಜಲವೇ ಸಕಲ ಕುಲಕೆ ತಾಯಿ" ಎಂದು ಹೇಳುತ್ತ ಕುಲಜರು ಯಾರು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಅವರು ನೀಡುವ ಸ್ಪಷ್ಟ ಚಿತ್ರದಲ್ಲಿ,

ಹರಿಯೇ ಸರ್ವೋತ್ತಮ ಹರಿಯೇ ಸರ್ವೇಶ್ವರ
ಹರಿಮಯವೆಲ್ಲವೆನುತ ತಿಳಿದು
ಸಿರಿಕಾಗಿನೆಲೆಯಾದಿ ಕೇಶವರಾಯನ
ಚರಣಕಮಲವನು ಕೀರ್ತಿಸುವನೆ ಕುಲಜ

ಹೀಗೆ ಕನಕದಾಸರು ಕುಲರಹಿತ, ನಿಷ್ಠಾಪೂರ್ಣ ಸಮಾಜದ ಕಲ್ಪನೆಯನ್ನು ಕೊಟ್ಟ ಮಾಂಧಾತರು. ಅವರ ಕೀರ್ತನೆಗಳನ್ನು ಒಳಹೊಕ್ಕು ನೋಡಿದಂತೆಲ್ಲ ಸಮಾಜ ಅರ್ಥಾತ್ ಪ್ರಪಂಚವೆಲ್ಲ ಪರಮಾತ್ಮಮಯವಾಗಿ ಕಾಣುತ್ತದೆ. ಆಗ,

ಬಯಲು ಆಲಯದೊಳಗೊ
ಆಲಯದೊಳಗೆ ಬಯ
ಬಯಲು ಆಲಯಗಳೆರಡು ನಯನದೊಳ
ನಯನ ಬುದ್ಧಿಯ ಒಳಗೊ
ಬುದ್ಧಿ ನಯನದ ಒಳ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿ
ಸವಿಯು ಸಕ್ಕರೆಯೊಳಗೊ
ಸಕ್ಕರೆಯು ಸವಿಯೊಳ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ
ಜಿಹ್ವೆಬುದ್ಧಿಯ ಒಳಗೊ ಬುದ್ಧಿ ಜಿಹ್ವೆಯೊಳ
ಜಿಹ್ವೆ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ
ಕುಸುಮದೊಳು ಗಂಧವೋ
ಗಂಧದೊಳು ಕುಸುಮ
ಕುಸುಮ ಗಂಧಗಳೆರಡು ಪ್ರಾಣದೊಳಗೊ
ಅಸಮಭವ ಕಾಗಿನೆಲೆಯಾದಿ ಕೇಶವರಾ
ಉಸುರಲೆನ್ನಳವಲ್ಲ ಎಲ್ಲ ನಿನ್ನೊಳಗೊ

ಎಂದು ತಿಳಿ ಹೇಳಿದಾಗ ಎಲ್ಲಿ ನೋಡಿದ ಅರಿವು ಆನಂದವಾಗಿ ಬಿಡುತ್ತದೆ. ಆಗ ದವನ್ನೇ ಕಾಣುವ ಉಣ್ಣುವ, ವಾಸಿಸುವ ಸುವ, ಕೇಳುವ ಸಮಾಜ ನಿರ್ಮಾಣವಾಗಿ ತ್ತದೆ. ಇಂಥ ಸಮಾಜವನ್ನು ನಿರ್ಮಾಣ ಮಾ ಶಕ್ತಿಯು ಕನಕದಾಸರ ಕೀರ್ತನೆಗಳಲ್ಲಿದೆ. ಮಹಾತ್ಮಜ್ಞಾನ.

ಇಂಥ ಮಹಾತ್ಮಜ್ಞಾನವನ್ನು ಶ್ರುತಪಡಿಸುವ ಕದಾಸರ ಒಂದೊಂದು ಕೀರ್ತನೆಯೂ ಸತ್ಯಘ ಗಳ ಆಧಾರದ ಮೇಲೆ ಮೂಡಿ ಬಂದು, ತ್ಮಕವಾಗಿ ಹೇಳುವ ಸುಂದರ ಭಾವಗೀತೆಗಳಾ ತತ್ತ್ವ ಮಂಥನದಲ್ಲಿ ಬಂದ ಅನುಭಾವ ನವನೀ ಉಂಡೆಯೇ ಆ ಕೀರ್ತನೆಗಳ ಸಂಪತ್ತು. ಧ್ವನಿ ತೆಯಿಂದ ಕೂಡಿದ ಚೇತೋಹಾರಿ ಜೀವ ಸಂ ಅಂತೆಯೇ ಕನಕದಾಸರನ್ನೂ, ಅವರ ಕೀರ್ತ ಳನ್ನೂ ಪಡೆದ ನಮ್ಮ ಬದುಕು ಪಾವನವಾ ನಮ್ಮ ಪಾಲಿಗೆ ಅದೆಲ್ಲ ಸಕಲ ಸಂಪತ್ತು. ದಶ್ರೀ. ಹೀಗಾಗಿ ಇಳೆಯಲ್ಲಿ ಹಿರಿ ತೀರ್ಥ ಪ್ರ ಇಳೆಯೆಲ್ಲ ಹರಿದಾಸರು. ಇಳೆಯ ಮೇಲಿನ ಯೆಲ್ಲ ಹರಿದಾಸರು. ಹೀಗಾಗಿ ಹರಿದಾಸರೆಲ್ಲ ಬಂಧು ಬಳಗ. ಈ ಬಳಗಕ್ಕೆಲ್ಲ ಚೆನ್ನಬಾಲ ನೆಂಬ ಕನ್ನೆಗೊನೆ ಬಾಳೆಹಣ್ಣು. ಕೇಸರೀಹ ಕೀರ್ತನ. ಕನಕರ ಕನ್ನಡ ಕಸ್ತೂರಿ ಕೀರ್ತನ.



# ಶ್ರೀ ವೆಂಕಟೇಶ್ವರಸ್ವಾಮಿ ಆಲಯ

# ವಿಜಯನಗರದ ರಾಯರು

ಆಂಗ್ಲಮೂಲ : ಡಾ|| ಎನ್. ರಮೇಶನ್

ಅನುವಾದ : ಬಿ. ಎನ್. ಶ್ರೀನಿವಾಸನ್

ವಿಜಯನಗರದ ರಾಜರ ಕೈಸೇರಿತು ಚಿತ್ತೂರು ಜಿಲ್ಲೆ ವಿಜಯನಗರ ಸಾಮ್ರಾಜ್ಯಸ್ಥಾಪನೆ ಆದ ನಂತರ. ಕ್ರಿ.ಶ. ೧೩೩೬ ರಿಂದ ಕ್ರಿ.ಶ. ೧೭ ಶತಮಾನದ ಕಡೆಯಭಾಗದವರೆಗೆ ನಾಲ್ಕು ವಂಶಗಳು -ಸಂಗಮ, ಸಾಳುವ, ತುಳುವ, ಅರವೀಡು -ವಂಶಗಳು ವಿಜಯನಗರವನ್ನು ಆಳಿದವು. ಕ್ರಿ.ಶ. ೧೩೩೬ ರಲ್ಲಿ ಹರಿಹರನು ಸಂಗಮ ವಂಶದ ಸಾಮ್ರಾಜ್ಯಸ್ಥಾಪಿಸಿದಾಗ ಪೂರ್ವದಲ್ಲಿ ನೆಲ್ಲೂರಿನಿಂದ ಪಶ್ಚಿಮದಲ್ಲಿ ಉತ್ತರ ಕರ್ನಾಟಕದ ಬಾದಾಮಿ ಧಾರವಾಡಗಳ ವರೆಗೆ ಹರಡಿತ್ತು. ಹರಿಹರನ ನಂತರ ಪ್ರಭುವಾದ ಬುಕ್ಕನು ತನ್ನ ಮಕ್ಕಳನ್ನು ಪ್ರಾಂತೀಯ ರಾಜಪ್ರತಿನಿಧಿಗಳನ್ನಾಗಿ ನಿಯಮಿಸಿ, ರಾಜ್ಯವನ್ನು ಒಂದುಗೂಡಿಸಿ ಪ್ರಭುಶಕ್ತಿಯನ್ನು ಹೆಚ್ಚಿಸಲು ಪ್ರಯತ್ನಿಸಿದ. ಹೀಗಾಗಿ ಭಾಸ್ಕರ ಭಾವದೊರೆ ಉದಯಗಿರಿಯ ರಾಜ್ಯಪಾಲನಾಗಿಯೂ, ಕುಮಾರಕಂಪಣನು ಮುಳಬಾಗಲು, ಹಾಗೂ ಜಿಲ್ಲೆಯ ಒಂದು ಭಾಗವನ್ನು ಒಳಗೊಂಡ ಪಡೈವೀಡುವಿಗೂ ರಾಜ್ಯಪಾಲನಾಗಿಯೂ ನೇಮಕವಾದರು. ಈ ಪ್ರಾಂತ್ಯದಲ್ಲಿ ಒಂದನೇ ಬುಕ್ಕನ ಹಾಗೂ ಕುಮಾರ ಕಂಪಣನ ಹಲವು ಶಾಸನಗಳಿವೆ. ಇವುಗಳಲ್ಲಿನ ಅತಿ ಪ್ರಾಚೀನವಾದದ್ದು ದೇತಾರೀಖಿನದಾಗಿದ್ದು ತಿರುಮಲೆಯ ಆಲಯಕ್ಕೆ ದಿನಕ್ಕೆರಡು ಸಂಧಿಗಳ ನೈವೇದ್ಯಕ್ಕಾಗಿ ನೀಡಿದ ಒಂದು ಗ್ರಾಮವನ್ನು ಗುರುತಿಸುತ್ತದೆ. ಕುಮಾರ ಕಂಪಣ ಹಾಗೂ ಅವನ ಅಧಿಕಾರಿಗಳ ಶಾಸನಗಳು ಹಲವೆಡೆ ದೊರೆತಿದ್ದು ಆಲಯಗಳಿಗೆ ನೀಡಿದ ದತ್ತಿಗಳನ್ನು ಗುರುತಿಸುತ್ತವೆ. ಅವನ ಅಧಿಕಾರಿಗಳಲ್ಲಿ ಸಾಳುವ ಮಂಗಿದೇವ, (ಕಂಪಣನ ಸೇನಾನಿ) ಸೋಮಪ್ಪ, ಗೋಪಣ್ಣರುಗಳು ಉಲ್ಲೇಖಾರ್ಹರು. ಸಾಳುವ ಮಂಗಿದೇವನು ಚಿತ್ತೂರು ಸುತ್ತಮುತ್ತಲ ಪ್ರದೇಶಗಳನ್ನು ಆಳುತ್ತಿದ್ದು ನಂತರದ ಸಾಳುವರ ಕೇಂದ್ರವಾಯಿತು. ಸೋಮಪ್ಪನು ಕಂಪಣನ ಪ್ರಧಾನಿಯಾಗಿದ್ದ. ಕಂಪಣನ ಎರಡು ಶಾಸನಗಳಲ್ಲಿ ಇವನು ಹೆಸರಿಸಲ್ಪಟ್ಟಿದ್ದಾನೆ. ಪುಲಿನಾಡು ಪ್ರಾಂತ್ಯದಲ್ಲಿ - ಸುಂಕ ವಸೂಲಿ ಮಾಡುತ್ತಿದ್ದ ಮಾಯದೇವರಿಗೆ ಚಿತ್ತೂರು ರಾಜ್ಯದಲ್ಲಿದ್ದ ಕೂರ್ಮಾವಿ ಗ್ರಾಮದ ವಿಷ್ಣುದೇವಾಲಯಕ್ಕಾಗಿ ಅಲ್ಲಿನ ಮೂಲಕ ಹಾದುಹೋಗುವ ಎಲ್ಲ ವಸ್ತುಗಳ ಮೇಲೂ ಒಂದು ಭಾಗದ ಸುಂಕವನ್ನು ವಿಧಿಸಲು ಈತ ಆಜ್ಞೆ ಮಾಡಿದ. ಕಂಪಣನ ಬ್ರಾಹ್ಮಣ ಸೇನಾನಿಗಳಲ್ಲಿ ಒಬ್ಬಗೋಪಣ್ಣ ಚೆಂಜಿಯನ್ನು ಆಳುತ್ತಿದ್ದು, ಈತ ತಿರುಮಲೆಗೆ ತೀರ್ಥಯಾತ್ರೆಗೆಂದು ಹೋದಾಗ ಅಲ್ಲಿ ವೆಂಕಟೇಶ್ವರಸ್ವಾಮಿಯೊಡನೆ ಪೂಜೆ ಗೊಳ್ಳುತ್ತಿದ್ದ ಶ್ರೀರಂಗದ ರಂಗನಾಥಸ್ವಾಮಿಯನ್ನೂ ಕಂಡ. ಶ್ರೀರಂಗಂ ಮೇಲಿನ ಮಹಮದೀಯ ಧಾಳಿಯ ಕಾಲಕ್ಕೆ ಸುರಕ್ಷಿತವಾಗಿಡಲೆಂದು ಆಳಗಿಯ ಮಣವಾಳ ಪೆರುಮಾಳರನ್ನು ಶ್ರೀರಂಗದಿಂದ ತಿರುಮಲೆಗೆ ತರಲಾಗಿದ್ದಿತು. ತಿರುಮಲೆಯ ಆಲಯದ ಅರ್ಚಕರ ಸಹಮತದೊಡನೆ ಈತ ಈ ವಿಗ್ರಹವನ್ನು ಮೊದಲು ಚೆಂಜಿಗೆ ತೆಗೆದುಕೊಂಡು ಹೋಗಿ ನಂತರ ಶ್ರೀರಂಗಕ್ಕೆ ಸೇರಿಸಿದ.

ಎರಡನೆ ಹರಿಹರನು ವಿಜಯನಗರ ಸಿಂಹಾಸನವನ್ನು ಕ್ರಿ.ಶ. ೧೩೭೭ ರಲ್ಲಿ ಅಧಿರೋಹಿಸಿ ಕ್ರಿ.ಶ. ೧೪೦೪ ರವರೆಗೆ ಆಳಿದ. ಕ್ರಿ.ಶ. ೧೩೭೦ ರಲ್ಲಿ



ಆತನ ಮಗ ದೇವರಾಯನು ಉದಯಗಿರಿಯ ರಾಜ್ಯಪಾಲನಾದದ್ದು ವಿಜಯನಗರ ಕೊಂಡವೀಡುಗಳ ನಡುವಣ ಸಂಬಂಧದಲ್ಲಿ ಒಂದು ಪ್ರಧಾನ ಘಟ್ಟ. ಈ ಪ್ರಾಂತ್ಯದಲ್ಲಿ ಎರಡನೇ ಹರಿಹರನ ಆಳ್ವಿಕೆಯನ್ನು ಹಲವು ಶಾಸನಗಳು ದಾಖಲಿಸುತ್ತವೆ. ತಮಿಳಿನ ಮಾಸಿ ತಿಂಗಳಿನಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದಲ್ಲಿ ಒಂದು ಉತ್ಸವವನ್ನು ಆರಂಭಿಸಿದ ಸಂಗತಿಯನ್ನು ಇವುಗಳಲ್ಲಿ ಒಂದು ಹೆಸರಿಸುತ್ತದೆ. ಎರಡನೆ ಹರಿಹರನು ಕ್ರಿ.ಶ. ೧೪೦೪ ರಲ್ಲಿ ತೀರಿಕೊಂಡನಂತರ ವಿಜಯನಗರ ರಾಜ್ಯದ ಉತ್ತರಾಧಿಕಾರಕ್ಕೆ ವಿವಾದವಾಯಿತು. ಈ ಒಂದು ಅವ್ಯವಸ್ಥೆಯ ಲಾಭ ಪಡೆಯಲು ಕೊಂಡವೀಡಿನ ರೆಡ್ಡಿಗಳು ಉದಯಗಿರಿ ರಾಜ್ಯದ ಮೇಲೆ ಆಕ್ರಮಣ ನಡೆಸಿ ಕ್ರಿ.ಶ. ೧೪೦೭ ರಲ್ಲಿ ಚಂದ್ರಗಿರಿ ಸೀಮೆಯಲ್ಲಿನ ಪುಲುಗುಲ ನಾಡಿನೊಂದಿಗೆ ಹಲವು ಸ್ಥಳಗಳನ್ನು ಆಕ್ರಮಿಸಿದರು. ಸೇನೆಯನ್ನು ಮುನ್ನಡೆಸಿದ ಮಲ್ಲರೆಡ್ಡಿ -ರೆಡ್ಡಿರಾಜ 'ಪೆದ್ದಕೋಮಟಿ ವೇಮ'ನ ದಾಯಾದಿ -ಕ್ರಿ.ಶ. ೧೪೧೩ ರವರೆಗೆ ಆಕ್ರಮಿತ ಸೀಮೆಯಲ್ಲಿಯೇ ಉಳಿದ. ಆದರೆ ಉದಯಗಿರಿಯಿಂದ ದೇವರಾಯನು ಸೇನೆಯನ್ನು ಕಳುಹಿಸಿ ಇವನನ್ನು ಸ್ಥಾನಭ್ರಷ್ಟನನ್ನಾಗಿಸಿದ. ಕ್ರಿ.ಶ. ೧೪೦೫ ರಿಂದ ಕ್ರಿ.ಶ. ೧೪೧೮ ರವರೆಗಿನ ಹಲವು ಶಾಸನಗಳು ಒಂದನೇ ದೇವರಾಯನು ಈ ಪ್ರದೇಶದ ಹಿಡಿತ ಹೊಂದಿದ್ದನ್ನು ತಿಳಿಸುತ್ತವೆ. ಇವು ರಾಜನಿಂದಲೂ, ಯುವರಾಜ ವಿಜಯಬುಕ್ಕ ಅಥವಾ ವಿಜಯಭೂಪತಿ ಅಥವಾ ವೀರಬುಕ್ಕನಿಂದಲೂ ಅವರ ಅಧೀನ ಅಧಿಕಾರಿಗಳಿಂದಲೂ ನೀಡಲಾದ ದತ್ತಿಗಳನ್ನು ದಾಖಲಿಸುತ್ತವೆ. ಈ ಪ್ರಾಂತ್ಯದಲ್ಲಿನ ಒಂದು ಶಾಸನ ಎರಡನೇ ಕಂಪಣನ ಮಗ ಜೊಮ್ಮನನನ್ನು ಹೆಸರಿಸಿದೆ. ಎರಡನೇ ದೇವರಾಯನ (ಕ್ರಿ.ಶ. ೧೪೨೨-೧೪೪೬) ಆಳ್ವಿಕೆಯನ್ನೂ ಹಲವಾರು ಶಾಸನಗಳು ದಾಖಲಿಸಿವೆ. ಈತನ ಅಧೀನನಾದ ಮಲ್ಲನ ಚಂದ್ರಗಿರಿ ರಾಜ್ಯವನ್ನು ಶಕ ೧೩೩೦ (ಕ್ರಿ.ಶ. ೧೪೦೮) ರಿಂದ ಶಕವರ್ಷ ೧೩೬೬ (ಕ್ರಿ. ಶ. ೧೪೪೪) ರವರೆಗೆ ಆಳಿದ. ಈತನ ಉತ್ತರಾಧಿಕಾರಿ ಸಾಳುವ, ಪೆರಿಮಲ್ಲಯದೇವ.(ಕ್ರಿ.ಶ. ೧೪೬೩) ಗಜಪತಿರಾಜ ಕಪಿಲೇಂದ್ರನ ಮಗ ಮಲ್ಲಿಕಾರ್ಜುನ ಹಮ್ಮೀರ್ರನು ವಿಜಯನಗರದ ವಿರುದ್ಧ ದಂಡೆತ್ತಿ ಬಂದು ಅನೇಕ ಸ್ಥಳಗಳನ್ನು ಆಕ್ರಮಿಸಿದ್ದೇ ಅಲ್ಲದೆ ಚಂದ್ರಗಿರಿ ಕೋಟೆಯನ್ನೂ ಹಿಡಿದ. ಆದರೆ ಇದುವರೆಗೆ ತಿಳಿಯದಿರುವ ಕಾರಣಗಳಿಂದಾಗಿ, ಒರಿಸ್ಸಾದ ಸೈನ್ಯ ಈ ಪ್ರಾಂತ್ಯವನ್ನು ಬಿಟ್ಟು ಹೊರಟಿತು.

ವಿಜಯನಗರದ ಮೇಲಿನ ಗಜಪತಿಗಳ ಪದೇ ಪದೇ ಆಕ್ರಮಣಗಳು, ಮಲ್ಲಿಕಾರ್ಜುನನ ಹತ್ಯೆ, ಎರಡನೇ ವಿರೂಪಾಕ್ಷನು ವಿಜಯನಗರ ಸಿಂಹಾಸನವನ್ನೇರಿದ್ದು -ದೀರ್ಘಕಾಲದಿಂದ ಕಾಯುತ್ತಿದ್ದ ವಿಚ್ಛಿದ್ರಕಾರಕ ಶಕ್ತಿಗಳಿಗೆ ಅವಕಾಶವನ್ನು ನೀಡಿದವು. ಕ್ರಿ.ಶ. ೧೪೫೬ ರಲ್ಲಿ ಕುಲಧನವಾದ ಚಂದ್ರಗಿರಿ ರಾಜ್ಯವನ್ನು ಪಡೆದ ಚಂದ್ರಗಿರಿಯ ರಾಜ ಸಾಳುವ ಗುಂಡನ ಮಗ ಸಾಳುವನರಸಿಂಹನು ಆ ರಾಜಕತೆಯ ವರ್ಷಗಳಲ್ಲಿ ನಿಧಾನವಾಗಿ ತನ್ನ ಹಿಡಿತವನ್ನು ಚಿತ್ತೂರು, ಉತ್ತರ ದಕ್ಷಿಣ ಆರ್ಕಾಟುಗಳು ಕೋಲಾರ ಜಿಲ್ಲೆಗಳಿಗೆ ವಿಸ್ತರಿಸಿದ. ಇವನ ಪ್ರಾಬಲ್ಯ ಎಷ್ಟು ಹೆಚ್ಚಿತೆಂದರೆ ಮಲ್ಲಿಕಾರ್ಜುನನ ಕಿರಿಯ ಮಗ ರಾಜಶೇಖರನು ಇವನ ಆಸ್ಥಾನದಲ್ಲಿ ಆಶ್ರಯಪಡೆದ. ಹೆಚ್ಚಿನ ಒಳಸಂಚುಗಾರರಂತೆ ಸಾಳುವ ನರಸಿಂಹನೂ ರಾಜ್ಯದಲ್ಲಿ ಪ್ರಭುತ್ವವನ್ನು ಸ್ಥಾಪಿಸುವುದಕ್ಕಿಂತಲೂ, ಸಿಂಹಾಸನವನ್ನು ಕೈವಶಮಾಡಿಕೊಳ್ಳುವುದು ಸುಲಭವೆಂದು ಕಂಡುಕೊಂಡ. ಹೀಗಾಗಿ ಎರಡನೇ ವಿರೂಪಾಕ್ಷನ ಉತ್ತರಾಧಿಕಾರಿಯಾಗಿ ಸಿಂಹಾಸನವನ್ನೇರಿದ ಪ್ರೌಢದೇವರಾಯನನ್ನು ಓಡಿಸುವಂತೆ, ನರಸನಾಯಕನ ಹಿರಿತನದಲ್ಲಿ ಒಂದು ಸೈನ್ಯವನ್ನು ಕಳುಹಿಸಿದ. ನರಸನಾಯಕನಿಗೆ ಯಾವುದೇ ಅಡ್ಡಿಯೂ ಉಂಟಾಗದೆ ಪ್ರೌಢದೇವರಾಯನು
ರಾಜಧಾನಿಯನ್ನು ತ್ಯಜಿಸಿದ. ಸಾಳುವ ನರಸಿಂಹನ
ನರಸನಾಯಕನ ಹಿಂದೆಯೇ ಬಂದು ಕ್ರಿ.ಶ. ೧೪೮
ರಲ್ಲಿ ಪಟ್ಟಾಭಿಷಿಕ್ತನಾದ.

ಸಾಳುವ ನರಸಿಂಹನ ಪಟ್ಟಾಭಿಷೇಕದಿಂದಾ
ವಿಜಯನಗರದಲ್ಲಿ ಎರಡನೇ ರಾಜವಂಶ
ಸಾಳುವ ವಂಶ ಅಧಿಕಾರಕ್ಕೆ ಬಂದಿತು. ಸಾಳು
ನರಸಿಂಹನು ಕ್ರಿ. ಶ. ೧೪೯೦ ರವರೆಗೆ ಆಳಿದ ಮೇ
ಅವನ ಮಗ ಇಮ್ಮಡಿ ನರಸಿಂಹನು ಉತ್ತರಾಧಿ
ರಿಯಾಗಿ ನರಸನಾಯಕನು ರಾಜಪ್ರತಿನಿಧಿಯಾ
ಈ ಕಾಲದಲ್ಲಿ ಧರ್ಮಕ್ಕಾಗಿ ತನ್ನ ಜೀವನವ
ಮೀಸಲಾಗಿಟ್ಟ ಕಂದಾಡೈ ರಾಮಾನುಜಯ್ಯಂಗ
ರ್ಯನು ಪ್ರಮುಖನಾಗಿದ್ದ. ಸಾಳುವ ನರಸಿಂಹನಿ
ಈತ ಗುರುವಾಗಿದ್ದಿರಬೇಕು ಹಾಗೂ ತಿರುಪತಿ
ತಿರುಮಲೆಗಳಲ್ಲಿ ಸಾಳುವ ನರಸಿಂಹನಿಂದ ಸ್ಥಾ
ತವಾದ ಉಚಿತಾನ್ನ ಸತ್ರಗಳನ್ನು ನೋಡಿಕೊಳ್ಳು
ದರಲ್ಲಿ ನೆರವು ನೀಡಿರಬೇಕು. ಈತನ ನೆರವಿನಿಂ
ಸಂತುಷ್ಟನಾದ ಸಾಳುವನರಸಿಂಹನು ಈ ರಾಮ
ನುಜ ಕೂಟಗಳಿಗಾಗಿ ತಾನು ದಾನ ನೀಡಿದ ಹ
ಗಳ ನಿರ್ವಹಣೆಯಲ್ಲಿ ಈತನಿಗೆ ಹೆಚ್ಚಿನ ಸ್ವಾತಂ
ನೀಡಿದ. ನರಸನಾಯಕನು ಕ್ರಿ. ಶ. ೧೫೦೩ ರ
ಮರಣ ಹೊಂದಿ, ರಾಜ್ಯವನ್ನು ಹಾಗೂ ರಾಜ್ಯ
ವನ್ನು ಮಹತ್ವಾಕಾಂಕ್ಷಿಯಾದ ತನ್ನ ಮಗ ವೀರ
ರಸಿಂಹನಿಗೆ ಬಿಟ್ಟು ಹೋದ. ವೀರನರಸಿಂಹ
ಇಮ್ಮಡಿ ನರಸಿಂಹನನ್ನು ಸಿಂಹಾಸಚ್ಯುತನನ್ನಾಗಿ
ತಾನೇ ರಾಜನೆಂದು ಘೋಷಿಸಿಕೊಂಡು ಕ್ರಿ.
೧೫೦೫ ರಲ್ಲಿ ಪಟ್ಟಾಭಿಷಿಕ್ತನಾಗಿ ತುಳುವ ವಂ
ವನ್ನು ಆರಂಭಿಸಿದ. ಕ್ರಿ.ಶ. ೧೫೦೯ ರ ವರೆಗಿ
ಹಲವು ಶಾಸನಗ್ಗಳು ಇವನ ಆಳ್ವಿಕೆಯನ್ನು ಗುರು
ಸುತ್ತವೆ.

ವೀರನರಸಿಂಹನ ಮರಣಾನಂತರ ಅವನ ಮ
ಸಹೋದರ ಕೃಷ್ಣದೇವರಾಯನು ವಿಜಯನಗರ
ಸಿಂಹಾಸನವನ್ನೇರಿದ. ಈ ಪ್ರದೇಶದಲ್ಲಿ ಕಂಡು
ರುವ ಶಾಸನಗಳಲ್ಲಿ ಸುಮಾರು ೮೫ ಇವನ ಆ
ಕೆಯ ಕಾಲದವು. ಇವು ಶಕವರ್ಷ ೧೪೩೨ (ಕ್ರಿ.
೧೫೧೦) ರಿಂದ ಶಕವರ್ಷ ೧೪೫೧ (ಕ್ರಿ.ಶ. ೧೫೨
ರ ವರೆಗಿನವು. ಇವುಗಳಲ್ಲಿ ಹಲವು ರಾಯ ಮತ್ತವ
ಇಬ್ಬರು ರಾಣಿಯರು ತಿರುಮಲದೇವಿ, ಚೆನ್ನಾದೇ
ಯರು, ತಿರುಮಲೆಗೆ ಹಲವುಬಾರಿ ಬಂದಾಗ (
ವೆಂಕಟೇಶ್ವರಸ್ವಾಮಿ ಇವರ ಮನೆದೇವರು) ದೇ
ಲಯಕ್ಕೆ ನೀಡಿದ ದಾನಗಳನ್ನು ದಾಖಲಿಸುತ್ತ
ಹಲವು ಶ್ರೀಕಾಳಹಸ್ತಿಯ ದೇವಾಲಯಕ್ಕೆ ನೀಡಿ
ದಾನಗಳನ್ನೂ, ಹಲವು ಶಾಸನಗಳು ಅವನ ಒ
ಶನವನ್ನು ಒಪ್ಪಿದ ಅವನ ಅಧಿಕಾರಿಗಳು ಹಲ
ದೇವಾಲಯಗಳಿಗೆ ನೀಡಿದ ದತ್ತಿಗಳನ್ನೂ ದಾ

## ಪ್ರಕಟಣೆ :

ತಿರುಮಲೆಗೆ ಹೋಗುವ ಘಾಟ್‌ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

**ತಿ. ತಿ. ದೇ.**

ಲಿಸುತ್ತವೆ. ಕೃಷ್ಣದೇವರಾಯನು ತಿರುಮಲೆಗೆ ಏಳು ಬಾರಿ ಆಗಮಿಸಿದ್ದು ತನ್ನ ಕೃತಿಯಾದ "ಆಮುಕ್ತಮಾಲ್ಯದ"ವನ್ನು ಸ್ವಾಮಿಗೆ ಸಮರ್ಪಿಸಿದ್ದಾನೆ.

ಏನೇ ಆದರೂ ಅವನ ತಿರುಮಲೆಯ ಯಾತ್ರೆಗಳು ದೇವರನ್ನು ದರ್ಶಿಸಲೆಂದೇ ಮಾಡಿದ ತೀರ್ಥಯಾತ್ರೆಗಳಾಗಿರಲಿಲ್ಲ. ವಿಶೇಷವಾದ ಧಾರ್ಮಿಕ ಅವಧಾರಣೆಯನ್ನು ಹೊಂದಿದ್ದ ಕಡೆಯ ಎರಡು ಮೂರು ಯಾತ್ರೆಗಳ ಹೊರತು ಮಿಕ್ಕ ನಾಲ್ಕೂ ಅವನು ಗಜಪತಿ ರಾಜ್ಯದ ಮೇಲೆ ದಂಡೆತ್ತಿ ಹೋಗುವ ಕಾಲದಲ್ಲಿ ನೀಡಿದ ಭೇಟಿಗಳು. ಕ್ರಿ.ಶ. ೧೫೧೩ ರ ಫೆಬ್ರವರಿ ೧೦ ರಂದು ಅವನು ತನ್ನ ಇಬ್ಬರು ರಾಣಿಯರೊಡನೆ ತಿರುಮಲೆಗೆ ಬಂದ. ಅಲ್ಲಿಂದ ಮುಂದಕ್ಕೆ ಶ್ರೀಕಾಳಹಸ್ತಿಗೆ ಬಂದು ಅಲ್ಲಿನ ದೇವರಿಗೆ ಆಭರಣಗಳನ್ನು ಅರ್ಪಿಸಿದ. ಕ್ರಿ.ಶ. ೧೫೧೩ ರ ಮೇ ತಿಂಗಳ ಎರಡರಂದು ಮತ್ತೆ ತಿರುಮಲೆಗೆ ಬಂದಿದ್ದ. ತಿರುಮಲೆಯಿಂದ ಹೊರಟ ಅವನು ಕ್ರಿ.ಶ. ೧೫೧೩ ರ ಮೇ ತಿಂಗಳ ೧೧ ರಂದು ಶ್ರೀಕಾಳಹಸ್ತಿಯಲ್ಲಿದ್ದ. ಅದೇವರ್ಷದ ಜೂನ್ ೮ ರಂದು ಮೂರನೆಯ ಬಾರಿಗೆ ವಿಜಯನಗರದಿಂದ ತಿರುಮಲೆ, ಕಾಳಹಸ್ತಿಗಳಿಗೆ ಹೊರಟು ರಾಜಧಾನಿಗೆ ಸೆಪ್ಟೆಂಬರ್ ೨೦ ರಂದು ಹಿಂದಿರುಗಿದ. ತಿರುಮಲೆ ಕಾಳಹಸ್ತಿಗಳ ಈ ವಾಯುವೇಗದ ಯಾತ್ರೆಗಳು ಕೆಲಕಾಲದಲ್ಲಿಯೇ ಕೊನೆಯಾದವು.

ಕೃಷ್ಣದೇವರಾಯನ ಕೊನೆಗಾಲದಲ್ಲಿ ಉತ್ತರಾಧಿಕಾರಿಯ ಸಮಸ್ಯೆ ಅವನ ಕಾಲವನ್ನೂ, ಗಮನವನ್ನೂ, ಸೆಳೆದಿರಬೇಕು. ಅವನು ತಾನೇ ಸೆರೆಗೊಳಿಸಿದ್ದ ತನ್ನ ಮಲಸಹೋದರ ಅಚ್ಯುತರಾಯನನ್ನು ಚಂದ್ರಗಿರಿಯ ಸೆರೆಯಿಂದ ಬಿಡುಗಡೆಗೊಳಿಸಿ, ಅವನನ್ನು ತನ್ನ ಉತ್ತರಾಧಿಕಾರಿಯೆಂದು ಘೋಷಿಸಿದ. ಅಚ್ಯುತರಾಯನ ಪಟ್ಟಾಭಿಷೇಕ ಸರಳ ಸುಸೂತ್ರವೇನಾಗಲಿಲ್ಲ. ಕೃಷ್ಣದೇವರಾಯನ ಅಳಿಯ ರಾಮರಾಯನು ಕೃಷ್ಣದೇವರಾಯನ ಚಿಕ್ಕ ಮಗನನ್ನು ಸಾಮ್ರಾಟನೆಂದು ಘೋಷಿಸಿ ತಾನೇ ಸಿಂಹಾಸನ ವನ್ನಾಕ್ರಮಿಸಲು ಪ್ರಯತ್ನಿಸಿದ. ಆದರೆ ಅಚ್ಯುತರಾಯನ ಆಪ್ತನೂ, ಸಾಮ್ರಾಜ್ಯದಲ್ಲಿಯೇ ಅತಿಪ್ರಭಾವ ಶಾಲಿಯೂ ಆಗಿದ್ದ ಸಾಳುವ ನಾಯಕನ ವಿರೋಧದಿಂದಾಗಿ ಈ ಪ್ರಯತ್ನ ನೆರವೇರಲಿಲ್ಲ. ಸಾಳುವ ನಾಯಕನು ರಾಜಧಾನಿಯನ್ನು ಆಕ್ರಮಿಸಿ ಚಂದ್ರಗಿರಿಯಿಂದ ಅಚ್ಯುತರಾಯನು ರಾಜಧಾನಿಗೆ ಬರುವವರೆಗೆ ಅದನ್ನು ರಕ್ಷಿಸಿದ.

ರಾಮರಾಜನ ವಿರೋಧವೇ ಅಚ್ಯುತರಾಯನನ್ನು ಒಂದು ಅಸಾಧಾರಣ ಕಾರ್ಯದಲ್ಲಿ ತೊಡಗಿಸಿರಬೇಕು. ತನ್ನ ಮಲಸಹೋದರನ ಮರಣ



ವಾರ್ತೆಯನ್ನು ಕೇಳಿದ ಕೂಡಲೇ ಅಚ್ಯುತರಾಯನು ರಾಜಧಾನಿಗೆ ಪ್ರಯಾಣವಾಗುವ ಬದಲಿಗೆ ತಿರುಮಲೆಗೆ ನಡೆದು ಅಲ್ಲಿ ತನ್ನ ಪಟ್ಟಾಭಿಷೇಕವನ್ನು ನೆರವೇರಿಸಿಕೊಂಡ. ನಂತರ ಶ್ರೀಕಾಳಹಸ್ತಿಗೆ ಹೋಗಿ ಮತ್ತೊಮ್ಮೆ ಕಿರೀಟಧಾರಣಾ ಮಹೋತ್ಸವವನ್ನು ನಡೆಸಿಕೊಂಡ. ವಿಜಯನಗರದ ಅರಸರಲ್ಲಿ ಅಚ್ಯುತರಾಯನೇ ರಾಜಧಾನಿಯ ಹೊರಗೆ ಪಟ್ಟಾಭಿಷಿಕ್ತನಾದ ಮೊದಲ ರಾಜ ಎಂಬುದನ್ನು ಗಮನಿಸಬೇಕು. ಜೊತೆಗೇ ಒಂದಕ್ಕಿಂತ ಹೆಚ್ಚು ಬಾರಿ ಪಟ್ಟಾಭಿಷಿಕ್ತನಾದ ಮೊದಲ ರಾಜನೂ ಇವನೇ. ರಾಜಧಾನಿಯಲ್ಲಿ ತನ್ನ ವಿರೋಧಿಗಳು ಪ್ರಬಲರಾಗಬಹುದೆಂಬ ಅನುಮಾನದಿಂದ ಸಾಮ್ರಾಜ್ಯದ ಮೇಲೆ ತನ್ನ ಹಕ್ಕುದಾರಿಯನ್ನು ಬಲಗೊಳಿಸಲೆಂದು ಉದ್ದೇಶಪೂರ್ವಕವಾಗಿ ಎರಡು ಪುಣ್ಯಕ್ಷೇತ್ರಗಳಲ್ಲಿ ಅವನು ಪಟ್ಟಾಭಿಷಿಕ್ತನಾಗಿರಬೇಕು. ಸಾಮ್ರಾಜ್ಯದ ನಿರ್ವಹಣೆಯಲ್ಲಿ ರಾಮರಾಜನೊಡನೆ ಒಂದು ರೀತಿಯ ರಾಜಿಯನ್ನೂ ಏರ್ಪಡಿಸಿಕೊಂಡ ನಂತರ ರಾಜಧಾನಿಗೆ ಬಂದು ಮೂರನೆಯ ಬಾರಿ ಪಟ್ಟಾಭಿಷಿಕ್ತನಾದ ಮೇಲೆ ಅವನ ಅಧಿಕಾರವನ್ನು ಎಲ್ಲರೂ ಗುರುತಿಸುವಂತಾಯಿತು. ಅಚ್ಯುತರಾಯನು ರಾಮರಾಜನೊಡನೆ ರಾಜಿಯಾದದ್ದು ಸಾಳುವ ನಾಯಕನಿಗೆ ಸರಿಬರದೆ ಅವನು ದಂಗೆಯೆದ್ದ. ಈ ದಂಗೆಯನ್ನು ಅಡಗಿಸಲು ಒಂದು ದೊಡ್ಡ ಸೈನ್ಯದೊಡನೆ ಅಚ್ಯುತರಾಯನು ದಕ್ಷಿಣಕ್ಕೆ ಬಂದ. ಚಂದ್ರಗಿರಿಯಲ್ಲಿ ಸೈನ್ಯವನ್ನು ಬಿಟ್ಟು ತಿರುಮಲೆ ಕಾಳಹಸ್ತಿಗಳಿಗೆ ಹೋಗಿ ಅಲ್ಲಿನ ದೇವರುಗಳನ್ನು ಅರ್ಚಿಸಿ, ಬೆಲೆಬಾಳುವ ಆಭರಣಗಳನ್ನು ಅರ್ಪಿಸಿದ. ದಂಗೆಯನ್ನು ಅಡಗಿಸಿ ಹಿಂದಿರುಗುವಾಗಲೂ ಈ ಆಲಯಗಳನ್ನು ದರ್ಶಿಸಿದ. ಅವನ ಈ ತಿರುಗುಪ್ರಯಾಣದಲ್ಲಿ ಅವನೊಡನೆ ತಿರುವೆಂಗಡನಾಯಕನ ಆಲಯಕ್ಕೆ ಅವನ ಮಹಾರಾಣಿ ವರದಾದೇವಿಯೂ, ಕುಮಾರ ವೆಂಕಟಾದ್ರಿಯೂ ಇದ್ದರು. ಅವನು ಮಹಾದಾನಗಳನ್ನು - "ಕಪಿಲ - ಪಶುದಾನ" ಹಾಗೂ "ಸ್ವರ್ಣವರ್ಷ" ಗಳನ್ನು - ಮಾಡಿ ಮುತ್ತು, ರತ್ನ ವಜ್ರ ವೈಢೂರ್ಯಗಳಿಂದ ಕೂಡಿದ ಕಾಪು (ಕವಚ) ವನ್ನೂ, ನಾಲ್ಕು ಚಿನ್ನದ ಬಳೆಗಳನ್ನೂ, ಶಿರೋಭೂಷಣವಾದ ವಜ್ರಗಳ ಜೋಡಿ ಉಚ್ಚಿಪ್ಪುಗಳನ್ನೂ ವಜ್ರಕಿರೀಟದ ಮೌಳಿಮಣಿಯನ್ನೂ ವೆಂಕಟೇಶ್ವರಸ್ವಾಮಿಗೆ ಅರ್ಪಿಸಿದ. ಅವನ ಸಮರ್ಪಣೆಯಲ್ಲಿ "ಹವಳಗಳ ಮುತ್ತುಗಳ ಹಾರಗಳೂ ಇದ್ದವು".

ಅಚ್ಯುತರಾಯನು ರಾಜಧಾನಿಯಲ್ಲಿ ಬಹುಕಾಲ ಇರಲಾಗಲಿಲ್ಲ. ಅನಂತಪುರದ ಬಳಿಯ ಗುತ್ತಿಯು ದಂಗೆಕೋರರ ಕೈವಶವಾಗಿ ಅವರ ವಿರುದ್ಧ ಸೈನ್ಯ ನಡೆಸಬೇಕಾಯಿತು. ಸಮರ ಸಂಚಾರದ ಈ ಅವಕಾಶವನ್ನು ಅವನು ಮತ್ತೆ ತಿರುಮಲೆಯ ಯಾತ್ರೆಗಾಗಿ ಬಳಸಿಕೊಂಡು, ಲಕ್ಷ್ಮೀದೇವಿ ಮಹೋತ್ಸವವೆಂಬ ಉತ್ಸವವನ್ನು ವರ್ಷದಲ್ಲಿ ಐದು ದಿನಗಳ ಕಾಲ ತಿರುವೆಂಕಟ ಮುಡೈಯಾನ್ ಹಾಗೂ ಅಲರ್‌ಮೇಲ್ ಮಂಗೈಯರಿಗೂ, ಪುನರ್ವಸು ತಿರುನಾಳ್ ಎಂಬ ಉತ್ಸವವನ್ನು ಪುನರ್ವಸು ನಕ್ಷತ್ರದ ದಿನದಲ್ಲಿ (ವರ್ಷದಲ್ಲಿ ಹದಿಮೂರು ದಿನ) ರಘುನಾಥ (ಶ್ರೀರಾಮ) ನಾಚ್ಚಿಯಾರ್ (ಸೀತೆ) ಹಾಗೂ ಇಳಯ ಪೆರುಮಾಳ್ (ಲಕ್ಷ್ಮಣ)ರಿಗೆ ನಡೆಸಬೇಕೆಂದೂ, ಎರಡು ಹೊಸ ಉತ್ಸವಗಳನ್ನು ಸ್ಥಾಪಿಸಿದ. ವಿಜಯನಗರಕ್ಕೆ ಶಕವರ್ಷ ೧೪೫೮ (ಕ್ರಿ.ಶ. ೧೫೩೬) ರಲ್ಲಿ ಅವನು ಹಿಂದಿರುಗಿರಬೇಕು.

ಕ್ರಿ.ಶ. ೧೫೪೨ ರಲ್ಲಿ ಅಚ್ಯುತರಾಯನ ಆಳ್ವಿಕೆ ಕೊನೆಯಾಗಿ, ಅವನ ಮಗ ವೆಂಕಟನೂ, ಅವನ ಭಾವಮೈದುನ ಸಳಕುರಾಜು ತಿರುಮಲನೂ ಸ್ವಲ್ಪ ಕಾಲ ಸಿಂಹಾಸನಕ್ಕೆ ಬಂದಿರಬೇಕು. ಅಚ್ಯುತರಾಯನ ಮರಣವು ವೆಂಕಟನನ್ನು ಬೆಂಬಲಿಸಿದ ಸಳಕುರಾಜು ತಿರುಮಲನಿಗೂ ಸದಾಶಿವರಾಯನನ್ನು ಬೆಂಬಲಿಸಿದ ರಾಮರಾಜನಿಗೂ ಪುನಃ ಘರ್ಷಣೆಯಲ್ಲಿ ತೊಡಗಲು ಬಾವುಟ ಬೀಸಿದಂತಾಯಿತು. ಆದರೆ ತುಮುಲವು ಸದಾಶಿವರಾಯನ ಗೆಲುವಿನಲ್ಲಿ ಕೊನೆಗೊಂಡಿತು. ಕ್ರಿ.ಶ. ೧೫೪೩ ರಲ್ಲಿ ಸದಾಶಿವರಾ

ಯನು ಸಿಂಹಾಸನವನ್ನೇರಿ, ರಾಮರಾಯನು ರಾಜ ಪ್ರತಿನಿಧಿಯಾದ.

ರಾಮರಾಜನ ಶತ್ರುಗಳು ತಮ್ಮ ವಿರೋಧಿಯು ಶಾಶ್ವತವಾಗಿ ಅಧಿಕಾರ ಪಡೆಯುವುದನ್ನು ಸಹಿಸಲಾಗದೆ ಅವನ ಅಧಿಕಾರವನ್ನು ಕೀಳ್ಗಳೆಯಲು ಪ್ರಯತ್ನಿಸಿದರು. ಅವರುಗಳು ಚಂದ್ರಗಿರಿ ಕೋಟೆ ಹಾಗೂ ಅವರ ಆಚೀಚಿನ ಪ್ರಾಂತ್ಯಗಳನ್ನು ಆಕ್ರಮಿಸಿದರು. ಇನ್ನೂ ದಕ್ಷಿಣದ ಸಾಮಂತರು ಕಪ್ಪಗಾಣಿಕೆಗಳನ್ನು ನೀಡದೆ ಹೋದರು. ಈ ದಂಗೆಯನ್ನು ಸೈನಿಕ ಕಾರ್ಯಾಚರಣೆಯಿಂದ ಅಡಗಿಸಲಾಯಿತು. ರಾಮರಾಜನ ನಿರಂತರ ಬೆಳೆಯುತ್ತಿದ್ದ ಪ್ರಭಾವ ಹಾಗೂ ತಮ್ಮೊಳಗಿನ ಅಂತರಂಗ ವ್ಯವಹಾರದಲ್ಲಿ ಅವನು ಕೈಹಾಕುವುದನ್ನು ದಕ್ಷಿಣದ ಬಹಮನಿ ಸುಲ್ತಾನರ ಸಹಿಸಲಾರದಾದರು. ಅವನ ಅಧಿಕಾರ ಅತ್ಯುನ್ನತವಾದಾಗ ಈ ಸುಲ್ತಾನರು ಒಂದಾಗಿ ಕ್ರಿ.ಶ. ೧೫೬೫ ರಲ್ಲಿ ರಕ್ಕಸತಂಗಡಿ ಯುದ್ಧ ಮಾಡಿ ರಾಮರಾಜನನ್ನು ಮುಗಿಸಿದರು.

ಅಳಿಯ ರಾಮರಾಯನ ಮರಣಾನಂತರ ಅವನ ಸೋದರ ತಿರುಮಲನು ಸಾಮ್ರಾಟ ಸದಾಶಿವನ ಏಕಮಾತ್ರ ರಾಜಪ್ರತಿನಿಧಿಯೂ ರಾಜ ರಕ್ಷಕನೂ ಆದ. ತನ್ನ ಅಪೇಕ್ಷೆಯಂತೆ ರಾಜ ಮುದ್ರೆಯನ್ನೂ ಲಾಂಛನಗಳನ್ನೂ ಹೊಂದುವಲ್ಲಿ ಅವನಿಗೆ ರಾಜಧಾನಿಯ ಅಂದಿನ ವಾತಾವರಣ ಅನುಕೂಲವಾಗಿಲ್ಲವೆನ್ನಿಸಿತು. ಹೀಗಾಗಿ ವಿಜಯನಗರವನ್ನು ತ್ಯಜಿಸಿ ಅನಂತಪುರದ ಪೆನುಗೊಂಡೆಗೆ ಆಗಮಿಸಿದ. ನಂತರ ತನ್ನ ಸಾಮ್ರಾಜ್ಯವನ್ನು ಅದರ ಮೂರು ಪ್ರಧಾನ ಭಾಷೆಗಳಿಗನುಗುಣವಾಗಿ ಮೂರುಭಾಗಮಾಡಿ ಒಂದೊಂದನ್ನೂ ತನ್ನ ಒಬ್ಬೊಬ್ಬ ಮಗನಿಗೆ ನೀಡಿದ. ಇದರಿಂದಾಗಿ ಅವನ ಕಿರಿಯಮಗ ವೆಂಕಟನು ತಮಿಳು ಭಾಷೆಯ ರಾಜ್ಯದ ರಾಜ್ಯಪಾಲನಾಗಿ ಚಂದ್ರಗಿರಿ ಕೋಟೆಯಿಂದ ಆಡಳಿತ ನಡೆಸಿದ. ಕ್ರಿ.ಶ. ೧೫೭೦ ರಲ್ಲಿ ಸದಾಶಿವನನ್ನು ಪದಚ್ಯುತಗೊಳಿಸಿ ತಿರುಮಲನು ತಾನೇ ಸಾಮ್ರಾಟನಾದ. ಆದರೆ ಕೆಲ ತಿಂಗಳಲ್ಲೆ ಮೃತನಾದ. ನಂತರ ಅವನ ಮಗ ಒಂದನೇ ಶ್ರೀರಂಗನು ರಾಜನಾದ. ಇವನ ಕಾಲದಲ್ಲಿ ಕ್ರಿ. ಶ. ೧೫೭೬ ರಲ್ಲಿ ಬಿಜಾಪುರದ ಸುಲ್ತಾನ ಅಲಿ ಅದಿಲ್‌ಷಹನ ಧಾಳಿಯನ್ನೆದುರಿಸಬೇಕಾಯಿತು. ಸುಲ್ತಾನನ ಧಾಳಿಯಾದಾಗ ರಾಜನು ಸಮಸ್ತ ಸಂಪತ್ತಿನೊಡನೆ ಚಂದ್ರಗಿರಿ ಕೋಟೆಗೆ ಹಿಂದೆಗೆದ. ರಾಯನೊಡನೆ ಸಂಧಿಯನ್ನು ಮಾಡಿಕೊಳ್ಳಲು ಸುಲ್ತಾನನು ಫಜಲ್‌ಖಾನನನ್ನು ಚಂದ್ರಗಿರಿಯ ಕೋಟೆಗೆ ಕಳುಹಿಸಿದ. ಫಜಲ್‌ಖಾನನು ಶ್ರೀರಂಗರಾಯನನ್ನು ತನ್ನೊಡನೆ ಅಲಿ ಅದಿಲ್‌ಷಹನ ಬಳಿ ಬಂದು ಸಂಧಿಯನ್ನು ಮಾಡಿಕೊಳ್ಳಲು ಒಡಂಬಡಿಸಿದ. ಶ್ರೀರಂಗರಾಯನು ಕ್ರಿ.ಶ. ೧೫೮೬ ರವರೆಗೆ ಆಳ್ವಿಕೆ ನಡೆಸಿ ಅಪುತ್ರನಾಗಿ ಮರಣಹೊಂದಿದ.

ಎರಡನೇ ವೆಂಕಟನು ಕ್ರಿ.ಶ. ೧೫೮೫ ರಲ್ಲಿ ಗದ್ದುಗೆಯನ್ನೇರಿದ. ಇವನ ಆಳ್ವಿಕೆಯಲ್ಲಿ ಗೋಲ್ಕೊಂಡದ ಸುಲ್ತಾನ ಮಹಮದ್ ಕುಲಿಯ ಧಾಳಿಯಾಯಿತು. ಸುಲ್ತಾನನ ಸೈನ್ಯ ತನ್ನ ಎದುರಿಗೆ ಬಂದವರನ್ನೆಲ್ಲ ಧೂಳೀಪಟ ಮಾಡಿದ್ದರಿಂದ ವೆಂಕಟನು ಶಾಂತಿಗಾಗಿ ಮೊರೆಯಿಡಬೇಕಾಯಿತು. ತನಗೆ ದೊರೆತ ಈ ಮಾತುಕತೆಯ ಅವಕಾಶವನ್ನು ಚೆನ್ನಾಗಿ ಬಳಸಿಕೊಂಡ ವೆಂಕಟನು ನಂತರ ಗೋಲ್ಕೊಂಡದ ಸುಲ್ತಾನನನ್ನು ಧಿಕ್ಕರಿಸಿದ. ಸುಲ್ತಾನನ ಒಂದು ಸೈನ್ಯ ರಾವಿಳ್ಳ ವಂಶದವರ ನೇತೃತ್ವದಲ್ಲಿ ದಂಡೆತ್ತಿ ಬಂದು ವಾಯಲ್ಪಾಡು ತಾಲ್ಲೂಕಿನ ಗುರ್ರಂಕೊಂಡ ದುರ್ಗವನ್ನು ಸೇರಿತು. ಎರಡನೇ ವೆಂಕಟನು ಧಾಳಿಕಾರರನ್ನು ಓಡಿಸಲು ಮಟ್ಲ ಅನಂತನನ್ನು ನಿಯಮಿಸಿದ. ಮಟ್ಲ ಅನಂತನು ತನ್ನ ಸೈನ್ಯದೊಡನೆ ಗುರ್ರಂಕೊಂಡಕ್ಕೆ ಬಂದು ಕೋಟೆಗೆ ದಿಗ್ಬಂಧನವನ್ನುಂಟುಮಾಡಿ ಕುಳಿತ. ರಾವಿಳ್ಳ ಸೇನಾನಿ ತನ್ನ ಬಳಿಯಿದ್ದ ಮದ್ದುಗುಂಡು ಸಾಮಗ್ರಿಯ ದಾಸ್ತಾನಿನಿಂದ ಧೈರ್ಯವಾಗಿ ಶತ್ರುವನ್ನೆದುರಿಸಿದರೂ ಅನಂತನು ಸ್ಥೈರ್ಯದಿಂದ ಸಮರ ನಡೆಸಿ ಮುತ್ತಿಗೆಯನ್ನು ಮುಂದುವರೆಸಿ ಕೊನೆಗೆ ಒಂದ ಕಡೆಯ ಕಾವಲು ಗೋಪುರವನ್ನುರುಳಿಸಿ ಒಳನುಗ್ಗಿದಾಗ, ರಾವಿಳ್ಳ ಪಡೆಗಳು ಕೋಟೆಯನ್ನು ರಕ್ಷಿಸಿಕೊಳ್ಳಲಾಗಲಿಲ್ಲ. ರಾವಿಳ್ಳ ಸೇನಾನಿ ಪರಿಸ್ಥಿತಿಯ ತೀವ್ರತೆಯನ್ನರಿತು ಶಾಂತಿಯ ಧ್ವಜಹಾರಿಸಿದ. ಪ್ರಾಯಶಃ ಕೋಟೆಯನ್ನು ಒಪ್ಪಿಸಿ ಹಿಂದಿರುಗಿರಬೇಕು. ಎರಡನೇ ವೆಂಕಟನ ಆಳ್ವಿಕೆ ಒಳಸಂಚುಗಳನ್ನೂ ಎದುರಿಸಬೇಕಾಯಿತು. ನಾದೇಂಡ್ಲ ಕೃಷ್ಣಮರಾಜನು ದಂಗೆಯೆದ್ದ. ಅವನನ್ನು ಸೆರೆಹಿಡಿದು ಚಂದ್ರಗಿರಿಗೆ ಒಯ್ಯಲಾಯಿತು. ಅವನು ತನ್ನ ಮರಣದ ವರೆಗೆ ಸೆರೆಯಲ್ಲಿಯೇ ಇದ್ದ.

ಕ್ರಿ.ಶ. ೧೬೧೪ ರಲ್ಲಿ ಎರಡನೇ ವೆಂಕಟ ತೀರಿಕೊಂಡು ಎರಡನೇ ಶ್ರೀರಂಗನೂ ರಾಮದೇವನು ಸಾಧಾರಣ ಶಾಂತಿಯ ಆಳ್ವಿಕೆ ನಡೆಸಿದರು. ರಾಮದೇವನ ಮರಣದಿಂದಾಗಿ ರಾಜ್ಯದಲ್ಲಿ ಅರಾಜಕತೆ, ಅಂತರ್ಯುದ್ಧಗಳು ತಲೆದೋರಿದವು. ಉತ್ತರಾಧಿಕಾರಿಯ ಯುದ್ಧದಲ್ಲಿ ಗೆದ್ದು ಬಂದ ಮೂರನೇ ವೆಂಕಟನಿಗೆ ಒಳಯುದ್ಧಗಳೂ, ಹೊರ ಆಕ್ರಮಣಗಳು ತಲೆನೋವಾದವು. ಹೊರಗಣ ಧಾಳಿ

ಳಲ್ಲಿ ಕ್ರಿ. ಶ. ೧೬೪೨ ರ ಕುತುಬ್ ಷಾಹಿ ರಾಜ ಅಬ್ದುಲ್ಲಾ ಕುತುಬ್ ಷಹನ ಧಾಳಿ ಪ್ರಮುಖವಾದದ್ದು. ರಾಯನ ಸ್ನೇಹಿತರು ಅವನನ್ನು ತೊರೆಯುವಂತಾಗಿ ರಾಯನೇ ಚಿತ್ತೂರಿನ ಪರ್ವತಾವಳಿಯಲ್ಲಿ ವನವಾಸಿಯಾಗಬೇಕಾಯಿತು. ನಾರಾಯಣವನದ ಕಾಡುಗಳಲ್ಲಿ ರಾಯ ಮರಣೋನ್ಮುಖನಾಗಿದ್ದಾಗ ಅವನ ಅಳಿಯ ಮೂರನೇ ಶ್ರೀರಂಗನು ವಿಜಯನಗರದ ಸಿಂಹಾಸನವನ್ನು ತಾನೇ ದಕ್ಕಿಸಿಕೊಳ್ಳಲು, ವಂಶ ಗೌರವವನ್ನುಳಿಸುವಂತೆ ಮುಂದೆ ಬಂದ.

ಕ್ರಿ.ಶ. ೧೬೪೨ ರಲ್ಲಿ ಮೂರನೆಯ ಶ್ರೀರಂಗನು ಪಟ್ಟಾಭಿಷಿಕ್ತನಾದ. ಅವನು ಮಾಡಬೇಕಾಗಿದ್ದ ಮೊದಲ ಕೆಲಸವೆಂದರೆ ತನ್ನ ರಾಜ್ಯದಲ್ಲಿದ್ದ ಆಕ್ರಾಮಕರನ್ನು ಹೊರತಳ್ಳುವುದು. ಕ್ರಿ.ಶ. ೧೬೪೩ ರಲ್ಲಿ ಗೋಲ್ಕೊಂಡದ ಸೈನ್ಯದ ಮುನ್ನಡೆಯನ್ನು ತಡೆಯಲು ಅವನು ತಿರುಪತಿಗೆ ಬಂದು ಪಾಳಯಹೂಡಿದ. ಅವನ ಬಳಿ ದೊಡ್ಡವಾದ ಸೈನ್ಯವಿದ್ದರೂ ಶತ್ರುವನ್ನು ಎದುರಿಸಲು ಹೆದರಿದ. ಜೊತೆಗೇ ಅವನ ಸಾಮಂತರಲ್ಲಿ ಹಲವರ ಒಳಸಂಚುಗಳು ಅವನ ಅಸಹಾಯಕತೆಯ ನಿರ್ವಿಣ್ಣಭಾವವನ್ನು ಹೆಚ್ಚಿಸಿತ್ತು. ಶ್ರೀಕಾಳಹಸ್ತಿಯ ದಾಮೆರ್ಲ ವೆಂಕಟಪತಿನಾಯಕನು ಶ್ರೀರಂಗನು ರಾಜನಾಗಿದ್ದಾಗಿನಿಂದಲೇ ಅವನ ವಿರೋಧಿಯಾಗಿದ್ದು, ಶತ್ರುವನ್ನು ಆಕ್ರಮಣಕ್ಕೆ ಹುರಿದುಂಬಿಸಿದ. ಗೋಲ್ಕೊಂಡದ ಸೈನ್ಯ ಬಂದಾಗ ಶ್ರೀರಂಗನು ಮೊದಲು ನಾರಾಯಣವನಕ್ಕೂ ನಂತರ ವೆಲ್ಲೂರಿಗೂ ಹಿಮ್ಮರಳಿದ. ತಿರುಗಿ ಬಂದ ಮೇಲೆ ವೆಂಕಟನಾಯಕನ ಒಳಸಂಚು ತಿಳಿದುಕೊಂಡು, ಅವನನ್ನು ಬಂಧಿಸಿ ಸೆರೆಯಲ್ಲಿಟ್ಟ. ಅವನನ್ನು ಮರಣದಂಡನೆಗೆ ಗುರಿ ಮಾಡಬಹುದಾಗಿದ್ದರೂ ಕ್ಷಮಿಸಿ ಅವನ ಸಂಪತ್ತಿನ ಒಂದು ಭಾಗವನ್ನು ಕಿತ್ತುಕೊಂಡ.

ರಾಜ್ಯಕ್ಕೆ ಮತ್ತೆ ಬಿಜಾಪುರ, ಗೋಲ್ಕೊಂಡದವರಿಂದ ಕಿರಿಕಿರಿಯಾಯಿತು. ಬಿಜಾಪುರದ ಸುಲ್ತಾನನು ಮುಸ್ತಾಫಾಖಾನನ ನೇತೃತ್ವದಲ್ಲಿ ಸೈನ್ಯವನ್ನು ಕಳಿಹಿದರೆ, ಗೋಲ್ಕೊಂಡ ಸೈನ್ಯವು ಮಹಮದ್ ಸಯ್ಯದ್ ಮಿರ್‌ಜುಮ್ಲನ ನೇತೃತ್ವದಲ್ಲಿ ಧಾಳಿಯಿಟ್ಟಿತು. ಮುಸ್ತಾಫಾಖಾನನು ಜಿಲ್ಲೆಯ ಬುಕ್ಕಪಟ್ಟಿಣದ ಮೂಲಕ ವೆಲ್ಲೂರಿಗೆ ನಡೆದರೆ ಮತ್ತೊಂದು ಪಡೆ ಖಾನ್ - ಎ. ಖಾನ್‌ನ ನೇತೃತ್ವದಲ್ಲಿ ಗುರ್‍ರಂ ಕೊಂಡಕ್ಕೆ ಲಗ್ಗೆ ಹಾಕಿತು. ಶ್ರೀರಂಗನು ಸ್ವರಕ್ಷಣೆಗೆಂದು ವೆಲ್ಲೂರಿನ ರಾಣಿಯರಿಂದ ಆಭರಣಗಳನ್ನೂ ತಿರುಮಲೆಯ ಆಲಯದಿಂದ ಧನವನ್ನೂ ವೆಚ್ಚಗಳಿಗಾಗಿ ಪಡೆದು ನಾನಾವಿಧವಾಗಿ ಪ್ರಯತ್ನಿಸಿದ. ಗೋಲ್ಕೊಂಡದ ಸೈನ್ಯ ಮಿರ್ ಜುಮ್ಲಾನ ಒಡೆತನದಲ್ಲಿ ಚಂದ್ರಗಿರಿ, ತಿರುಪತಿಗಳನ್ನು ಹಿಡಿದು ಪೂರ್ವಕ್ಕೆ ತಿರುಗಿತು. ಶ್ರೀರಂಗನೂ ರಾಜ್ಯವನ್ನು ರಕ್ಷಿಸುವ ಆಸೆಯನ್ನು ಕಳೆದುಕೊಂಡಿರಬೇಕು. ಗುರ್‍ರಂ ಕೊಂಡ ದುರ್ಗವೂ ಪತನವಾಯಿತು. ನಂತರದ ಮೂರು - ನಾಲ್ಕು ವರ್ಷಗಳಲ್ಲಿನ ಶ್ರೀರಂಗನ ಮೈಸೂರು ಸೀಮೆಯಲ್ಲಿನ ಅಲೆದಾಟದ ಬಗ್ಗೆ ಹೆಚ್ಚು ತಿಳಿದಿಲ್ಲ. ಆದರೆ ಅದು ಹೆಚ್ಚು ಕಾಲವಿರಲಿಲ್ಲ. ಈ ಮಧ್ಯೆ ಕರ್ನಾಟಕದಲ್ಲಿ ಮಿರ್‌ಜುಮ್ಲಾನ ಪ್ರಭಾವ ಹೆಚ್ಚುತ್ತಿರುವುದನ್ನು ಗಮನಿಸಿದ ಕುತುಬ್ ಷಾಹಿ ಸುಲ್ತಾನ ಅಬ್ದುಲ್ಲಾ ಕುತುಬ್ ಷಹನು ಮಿರ್ ಜುಮ್ಲಾನ ಪ್ರಭಾವವನ್ನು ತಗ್ಗಿಸಬೇಕೆಂದುಕೊಂಡ. ಇದರಿಂದಾಗಿ ಇಬ್ಬರಲ್ಲೂ ಭಿನ್ನಾಭಿಪ್ರಾಯ ವುಂಟಾಯಿತು.

ಇದರಿಂದಾಗಿ ಶ್ರೀರಂಗನು ಕರ್ನಾಟಕಕ್ಕೆ ಹಿಂದಿರುಗಿ ಬಿಜಾಪುರದವರು ಆಕ್ರಮಿಸಿದ್ದ ಸ್ಥಳಗಳನ್ನು ಪುನಃ ಪಡೆಯಲು ಮಿರ್ ಜುಮ್ಲಾ ಪ್ರಚೋದಿಸಿದ. ಬಿಜಾಪುರದ ಸೇನಾನಿ ಖಾನ್ ಮಹಮೆದನು ತಕ್ಷಣವೇ ವೆಲ್ಲೂರಿಗೆ ಬಂದು ಅಲ್ಲಿ ಬಿಜಾಪುರದ ಅಧಿಕಾರವನ್ನು ಪುನಃ ಸ್ಥಾಪಿಸಲು ಯತ್ನಿಸಿದ. ಯುದ್ಧದಲ್ಲಿ ಶ್ರೀರಂಗನು ಗೆದ್ದು ಖಾನನು ಚಂದ್ರಗಿರಿ ಹಾಗೂ ಸುತ್ತಣ ರಾಜ್ಯವನ್ನು ಬಿಟ್ಟುಕೊಟ್ಟು ಶಾಂತಿಯನ್ನು ಪಡೆಯಬಹುದೆಂದು ಒಪ್ಪಂದವಾಯಿತು. ಮಿರ್‌ಜುಮ್ಲನ ಸಂಚಿನಿಂದ ಕೋಪಗೊಂಡ ಅಬ್ದುಲ್ಲಾ ಕುತುಬ್‌ಷಹನು ಶ್ರೀರಂಗನೊಡನೆ ಒಪ್ಪಂದ ಮಾಡಿಕೊಂಡ. ಇದರಿಂದಾಗಿ ಶ್ರೀರಂಗನು ತಾನು ಕಳೆದುಕೊಂಡ ಪ್ರದೇಶವನ್ನೆಲ್ಲ ಮರಳಿ ಪಡೆಯುವಂತಾಯಿತು. ಅವನು ತಿರುಪತಿಯನ್ನು ವಶಪಡಿಸಿಕೊಂಡು ಇತರ ಪ್ರಾಂತ್ಯಗಳನ್ನು ಆಕ್ರಮಿಸುವ ಯೋಜನೆಗೈದ. ಆದರೆ ಗೋಲ್ಕೊಂಡದ ನವಾಬನು ತನ್ನ ಸ್ನೇಹದ ಧೋರಣೆಯನ್ನು ಬದಲಾಯಿಸಿ ಕರ್ನಾಟಕದ ಮೇಲೆ ಮತ್ತೆ ದಂಡು ಕಳುಹಿಸಿದ. ಶ್ರೀರಂಗನು ಯುದ್ಧದಲ್ಲಿ ಸೋತು ಕ್ರಿ.ಶ. ೧೬೫೩ ರಲ್ಲಿ ಬಿಜಾಪುರದ ಖಾನ್ ಮಹಮದನಿಂದ ಪಡೆದ ಚಂದ್ರಗಿರಿ ಕೋಟೆ ೧೬೫೮ ರಲ್ಲಿ ಕೈತಪ್ಪಿ ಕುತುಬ್ ಷಹನ ಕೈವಶವಾಯಿತು. ಶ್ರೀರಂಗನು ಎರಡನೆಯ ಬಾರಿ ಅಲೆಮಾರಿಯಾಗಬೇಕಾಯಿತು. ಕ್ರಿ.ಶ. ೧೬೬೫ ರಲ್ಲಿ ಅವನು ಪೆನುಗೊಂಡೆಗೆ ಹಿಂದಿರುಗಿದಂತೆಯೂ ೧೬೮೧ ರ ವರೆಗೆ ರಾಜ್ಯದ ಒಂದು ಭಾಗವನ್ನು ಆಳಿದಂತೆಯೂ ಕಂಡುಬರುತ್ತದೆ.

## ವಿಜಯನಗರದ ಕಾಲದಲ್ಲಿ ತಿರುಮಲೆ

ತೊಂಡಮಂಡಲವು ವಿಜಯನಗರದ ಆವಿರ್ಭಾವವಾದಾಗಲೇ ಅದರ ಒಂದು ಭಾಗವಾಗಿ ವಿಜಯನಗರದ ಪತನವಾಗುವ ವರೆಗೆ ಅದರ ಭಾಗವಾಗಿಯೇ ಇದ್ದಿತು. ತಿರುಮಲೆ - ತಿರುಪತಿ ಪ್ರಾಂತ್ಯಗಳ ಹಾಗೂ ಅಲ್ಲಿನ ಆಲಯಗಳ ಚರಿತ್ರೆಯಲ್ಲಿ ವಿಜಯನಗರದ ಸಂಗಮಸಾಳುವ ತುಳುವ ಅರವೀಡು ವಂಶಗಳ ಆಳ್ವಿಕೆಯ ಕಾಲ ಬಹು ಶೋಭಾಕರವಾದ ಕಾಲವಾಗಿದೆ.



ಸಂಗಮ ವಂಶದ ಅತಿಪ್ರಾಚೀನ ದಾಖಲೆಯೆಂದರೆ ಕ್ರಿ.ಶ. ೧೩೫೫ ರಿಂದ ಕ್ರಿ.ಶ. ೧೩೭೭ ರವರೆಗೆ ಆಳಿದ ಒಂದನೆಯ ಹರಿಹರನ ಕಾಲದ್ದು. ಶಾಸನಗಳಲ್ಲಿ ಕಂಡುಬರದೆ ಕೋಯಿಲ್ - ಒಳಗುವಿನಲ್ಲಿ ಕಂಡುಬರುವ ಒಂದು ಅಂಶವೆಂದರೆ ತಿರುಮಲೆಯಲ್ಲಿದ್ದ ರಂಗನಾಥನ ಉತ್ಸವ ಮೂರ್ತಿಯನ್ನು ಶ್ರೀರಂಗಕ್ಕೆ ಸಾಗಿಸಿದ್ದು. ವಿಜಯನಗರದ ರಾಜಕುಮಾರ ಕುಮಾರ ಕಂಪಣನು ಮಧುರೆಯ ಮುಸಲ್ಮಾನ ದೊರೆಯ ಮೇಲೆ ದಂಡೆತ್ತಿ ಹೋಗಿ ಅವನ ಆಳ್ವಿಕೆಯನ್ನು ಕೊನೆಗೊಳಿಸಿದ. ಕಂಪಣನ ಬ್ರಾಹ್ಮಣ ಸೇನಾನಿ ಗೋಪಣ್ಣನು ರಂಗನಾಥನ ಉತ್ಸವ ಮೂರ್ತಿಯನ್ನು ಕ್ರಿ.ಶ. ೧೩೭೧ರಲ್ಲಿ ಶ್ರೀರಂಗದಲ್ಲಿ ಪ್ರತಿಷ್ಠಾಪಿಸಿದ. ಈ ಮೂರ್ತಿಯನ್ನು ಜಿಂಜಿಗೆ ತೆಗೆದುಕೊಂಡು ಹೋಗಿ ಅಲ್ಲಿ ಸ್ವಲ್ಪ ಕಾಲ ಇಟ್ಟುಕೊಂಡು ನಂತರ ಶ್ರೀರಂಗದ ದೇವಾಲಯಕ್ಕೆ ಅದನ್ನು ತಲುಪಿಸಲಾಯಿತು. ಪ್ರಾಯಶಃ ಕ್ರಿ.ಶ. ೧೩೭೮ ರ ಹೊತ್ತಿಗೆ ಅದನ್ನು ತಿರುಮಲೆಯಿಂದ ಸಾಗಿಸಲಾಯಿತು. ನಂತರದ ರಾಜ ಎರಡನೇ ಹರಿಹರನು ತಿರುಮಲೆಯ ಶಾಸನವೊಂದರಲ್ಲಿ ಹೆಸರಿಸಲ್ಪಟ್ಟಿದ್ದಾನೆ.

ಸಂಗಮ ವಂಶದಲ್ಲಿಯೇ ಅತಿಶ್ರೇಷ್ಠನಾದ ಎರಡನೇ ದೇವರಾಯನು ಶ್ರೀ ವೆಂಕಟೇಶ್ವರನ ಹಿರಿಯ ಭಕ್ತನಾಗಿದ್ದ. ಅವನು ಕ್ರಿ.ಶ. ೧೪೨೮ ರಲ್ಲಿ ತಿರುಮಲೆಗೆ ಬಂದು ದೇವರನ್ನು ಆರಾಧಿಸಿದ್ದೇ ಅಲ್ಲದೆ ತಿರುಮಲೆಯ ಆಲಯದಲ್ಲಿ ವೇದಪಾರಾಯಣವನ್ನು ಪುನರುದ್ಧರಿಸಲು ಸಾಕಷ್ಟು ದಾನವನ್ನು ನೀಡಿದ.

ತಿರುಮಲೆ - ತಿರುಪತಿಗಳ ದಾಖಲೆಗಳಲ್ಲಿ ಸಂಗಮವಂಶದ ಕೊನೆಯ ದೊರೆ ಮಲ್ಲಿಕಾರ್ಜುನನ ಹೆಸರೂ ಇದೆ. ಈ ಪ್ರಾಂತ್ಯದಲ್ಲಿ ಕಂಡುಬರುವ ಇತರರೆಂದರೆ ಸಾಳುವ ಗೋಪಯ್ಯ, ಸಾಳುವ ತಿಮ್ಮರಾಜ, ಸಾಳುವ ಪರ್ವತರಾಜ, ಕಂಪಯದೇವ, ಸಾಳುವ ಯರ್ರಮರಾಜ, ತಮ್ಮಯ ದೇವಚೋಡ, ವಲ್ಲಭದೇವ. ಸಂಗಮ ವಂಶದ ಕೊನೆಯದಿನಗಳಲ್ಲಿ ವಿಜಯನಗರದ ಸರ್ವ ಸೇನಾನಿಯೂ, ಪರ್ಯಾಯ ಪ್ರಭುವೂ ಆಗಿದ್ದ ಸಾಳುವ ನರಸಿಂಹನು ತಿರುಮಲ - ತಿರುಪತಿ ಆಲಯಗಳ ದೊಡ್ಡ ರಾಜಪೋಷಕನಾಗಿದ್ದ. ತಿರುಮಲೆಯ ಆಲಯದಲ್ಲಿ ವಿಶೇಷವಾಗಿ ನಿರ್ಮಿತವಾದ ಮಂಟಪದಲ್ಲಿ ಅಣ್ಣಾ ಊಂಜಲ್ ತಿರುನಾಳ್ ಉತ್ಸವವನ್ನು ಏರ್ಪಡಿಸಿದ್ದು ಒಂದು ಹಿರಿಯ ಕೊಡುಗೆಯಾಯಿತು.

ಸಾಳುವ ವಂಶದ ಸಾಳುವ ನರಸಿಂಹನು ತನ್ನ ಪ್ರಭುವನ್ನು ಪದಚ್ಯುತಗೊಳಿಸಿ ತಾನೇ ಪ್ರಭುವಾದ. ಸಾಮ್ರಾಟನಾದ ಮೇಲೆ ಬೆಟ್ಟಕ್ಕೆ ಹೋಗುವ ಕಾಲುಹಾದಿಯ ಬದಿಯಲ್ಲಿ ಲಕ್ಷ್ಮೀನರಸಿಂಹ ವಿಗ್ರಹವನ್ನು ಪ್ರತಿಷ್ಠಾಪಿಸಿದ.

ತುಳುವ ವಂಶದ ಆಳ್ವಿಕೆ — (೧೫೦೭ - ೧೫೨೯) ಕೃಷ್ಣದೇವರಾಯನ ಆಗಮನದ ನಂತರ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯ ತನ್ನ ಪ್ರಸಿದ್ಧಿಯ ಉನ್ನತಿಯನ್ನು ಪಡೆಯಿತು. ಈ ರಾಜನಿಗೆ ಶ್ರೀ ವೆಂಕಟೇಶ್ವರಸ್ವಾಮಿ ಮನೆದೈವವಾದ. ಎಲ್ಲ ಪ್ರಮುಖ ಸಂದರ್ಭಗಳಲ್ಲೂ ರಾಯನು ಸ್ವಾಮಿಯನ್ನು ಸಂದರ್ಶಿಸಿ, ಆಶೀರ್ವಾದವನ್ನು ಬೇಡಿದ. ಈತನ ತಿರುಮಲೆಯ ಮೊದಲ ಸಂದರ್ಶನ ಕ್ರಿಶ ೧೫೧೩ ರ ಫೆಬ್ರವರಿ ೧೦ ರಂದು ನಡೆಯಿತು. ಶಾಸನಗಳು ೧೫೧೩, ೧೫೧೪, ೧೫೧೫, ೧೫೧೭, ೧೫೧೮, ೧೫೨೧ ರಲ್ಲಿ ರಾಯನು ತಿರುಮಲೆಯನ್ನು ಸೇರಿದ ವಿವರಗಳನ್ನು ಒದಗಿಸುತ್ತವೆ. ಇದರಿಂದಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಲವಾರು ಅನರ್ಘ್ಯ ಆಭರಣಗಳ ಕಾಣಿಕೆ ಪಡೆಯುವಂತಾಯಿತು.

ಕೃಷ್ಣದೇವರಾಯನಿಗೆ ಅವನ ಮಲಸಹೋದರ ಅಚ್ಯುತರಾಯನು ಉತ್ತರಾಧಿಕಾರಿಯಾದ (೧೫೨೯ - ೧೫೪೨) ಅಚ್ಯುತನು ತನ್ನ ಸಹೋದರನ ಆಳ್ವಿಕೆಯ ಕಾಲದಲ್ಲಿ ಚಂದ್ರಗಿರಿಯ ಕೋಟೆಯಲ್ಲಿದ್ದ. ಕೃಷ್ಣದೇವರಾಯನು ಮರಣ ಹೊಂದಿದ ನಂತರ ಅಚ್ಯುತರಾಯನು ತಿರುಮಲೆಗೆ ಆಗಮಿಸಿ, ಶ್ರೀ ವೆಂಕಟೇಶ್ವರ ಸ್ವಾಮಿಯ ಶಂಖೋದಕ ಸ್ನಾತನಾಗಿ ಪಟ್ಟಾಭಿಷಿಕ್ತನಾದ. ಇವನೂ ಈ ದೇವರ ಹಿರಿಯಭಕ್ತನೇ. ಸಾಮ್ರಾಟನು ಮತ್ತೆ ಕ್ರಿ.ಶ. ೧೫೩೩ ರಲ್ಲಿ ತಿರುಮಲೆಗೆ ಮತ್ತೆ ಆಗಮಿಸಿದ. ತನ್ನ ಪತ್ನಿ ವರದಾಜಿ, ಮಗ ಕುಮಾರ ವೆಂಕಟಾದ್ರಿಯರೊಡನೆ ಆಗಮಿಸಿದ ಅವನು ದೇವರಿಗೆ ಹಲವಾರು ಅಮೂಲ್ಯ ಆಭರಣಗಳನ್ನು ನೀಡಿದ. ಕ್ರಿ.ಶ. ೧೫೩೮ ರಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಅಲಮೇಲು ಮಂಗೆಯರಿಗಾಗಿ ತಿರುಮಲೆಯ ಆಲಯದಲ್ಲಿ ಮಹಾಲಕ್ಷ್ಮಿ ಮಹೋತ್ಸವವನ್ನು ಏರ್ಪಡಿಸಿದ.

ಸದಾಶಿವರಾಯನು ಅಚ್ಯುತರಾಯನ ಉತ್ತರಾಧಿಕಾರಿಯಾದ. ಇವನು ಬಹುಶಃ ಎರಡುಬಾರಿ ತಿರುಮಲೆಗೆ ಬಂದಿರಬೇಕು. ಮೊದಲಿಗೆ ೧೫೫೪ ರ ಫೆಬ್ರವರಿ ೩ ರಂದೂ ನಂತರ ಅದೇ ವರ್ಷದ ಜುಲೈ ತಿಂಗಳಿನಲ್ಲೂ ಆಗಮಿಸಿ, ಆಲಯಕ್ಕೆ ಹಲವಾರು ಕಾಣಿಕೆಗಳನ್ನು ನೀಡಿದ. ಅವನ ಅತಿ ಕಡಮೆಯಾದ ತಿರುಮಲೆಯಾತ್ರೆಗಳಿಗೂ, ಅವನ ಕಾಣಿಕೆಗಳಲ್ಲಿನ ಅತಿ ಕಡಮೆ ಬೆಲೆಗಳಿಗೂ, ಹಲ ಕಾಲ ಅವನು ರಾಜನೆಂದೇ ಗುರುತಿಸಲ್ಪಟ್ಟಿದ್ದರೂ ಅಳಿಯ ರಾಮರಾಯನೇ ನಿಜವಾದ ಪ್ರಭುವಾಗಿದ್ದದ್ದೇ ಕಾರಣವೆನ್ನಬಹುದು. ನಂತರ ರಾಮರಾಯನೇ ಸಾಮ್ರಾಟನಾಗಿ ಇವನು ಸೆರೆಮನೆಯ ಪಾಲಾದ.

ಅರವೀಡು ವಂಶದ ಅಳಿಯರಾಮರಾಯನು ಸದಾಶಿವನನ್ನು ಸೆರೆಗೆ ತಳ್ಳಿ ತಾನೇ ವಿಜಯನಗರದ ಸಾಮ್ರಾಟನಾದಮೇಲೆ ಸಮಕಾಲೀನ ಬಹಮನಿ ಸುಲ್ತಾನರ ರಾಜಕೀಯದಲ್ಲಿ ಹಸ್ತಕ್ಷೇಪಮಾಡಿ ತನ್ನ ಅಹಂಕಾರದಿಂದಲೂ, ಪ್ರಾಬಲ್ಯದಿಂದಲೂ, ಅವರನ್ನು ಕೀಳಾಗಿ ನಡೆಸಿಕೊಂಡ. ಸುಲ್ತಾನರು ತಮ್ಮ ಬಲವನ್ನೆಲ್ಲ ಒಟ್ಟುಗೂಡಿಸಿ ವಿಜಯನಗರವನ್ನು ಮುತ್ತಿದರು. ರಾಮರಾಯನು ರಕ್ಕಸ ತಂಗಡಿಯಲ್ಲಿ ಅವರೊಡನೆ ಯುದ್ಧಗೈದ. ಕ್ರಿ.ಶ. ೧೫೬೫ ರಲ್ಲಿ ನಡೆದ ಯುದ್ಧದಲ್ಲಿ ರಾಮರಾಯನು ಹತನಾಗಿ, ವಿಜಯನಗರದ ಸೇನೆ ಪರಾಜಯ ಪಡೆಯಿತು.

ತಿರುಮಲನು ತಿರುಮಲರಾಯನೆಂಬ ಹೆಸರಿನಿಂದ ಕ್ರಿ.ಶ. ೧೫೭೦ ರಲ್ಲಿ ಸಿಂಹಾಸನವನ್ನೇರಿದ. ಇವನ ಹೆಸರು ತಿರುಮಲೆಯ ಆಲಯದ ಉಯ್ಯಾಲೆ ಮಂಟಪದೊಡನೆ ಸೇರಿ ತಿರುಮಲರಾಯ ಮಂಟಪವೆಂದಾಗಿದೆ - ತಿರುಮಲರಾಯನ ಅಲ್ಪಕಾಲದ ಆಳ್ವಿಕೆಯಲ್ಲೂ ಮುಸಲ್ಮಾನರ ಧಾಳಿ ನಡೆದೇ ಇತ್ತು. ಬಿಜಾಪುರದ ಸುಲ್ತಾನನ ಸೈನ್ಯಗಳು ಆನೆಗೊಂದಿ, ಪೆನುಗೊಂಡ, ಆದೋನಿಗಳನ್ನು ಮುತ್ತಿದವು. ಆದರೆ ತಿರುಮಲರಾಯನು ರಾಮರಾಯನ ರೀತಿಯನ್ನೇ ಅನುಸರಿಸಿ ಸುಲ್ತಾನರಲ್ಲಿ ಒಬ್ಬರ ಮೇಲೆ ಇನ್ನೊಬ್ಬರನ್ನು ಎತ್ತಿಕಟ್ಟಿ ಅಪಾಯದಿಂದ ತಪ್ಪಿಸಿಕೊಂಡ.

ಒಂದನೇ ಶ್ರೀರಂಗನು ಇವನ ಉತ್ತರಾಧಿಕಾರಿಯಾದ (ಕ್ರಿ.ಶ. ೧೫೭೨ - ೧೫೮೫) ಈ ದೊರೆಯ ಕಾಲದ ಆರು ಶಾಸನಗಳು ತಿರುಮಲೆ ತಿರುಪತಿಗಳಲ್ಲಿ ದೊರೆಯುತ್ತವೆ. ಎಲ್ಲವೂ ಖಾಸಗೀ ವ್ಯಕ್ತಿಗಳಿಂದ ಉಂಟಾದ ದಾನಗಳನ್ನು ಕುರಿತೇ ಹೇಳುತ್ತವೆ.

ನಂತರದ ರಾಜ ವೆಂಕಟಪತಿ. (೧೫೮೫ - ೧೬೧೪) ಇವನು ತನ್ನ ಹಿಂದಿನ ಇಬ್ಬರ ಆಳ್ವಿಕೆಯಲ್ಲೂ ಚಂದ್ರಗಿರಿಯಲ್ಲಿ ರಾಜಪ್ರತಿನಿಧಿಯಾಗಿದ್ದು, ಉದಯಗಿರಿ, ಕೊಂಡವೀಡುಗಳಿಗೂ ಜವಾಬುದಾರನಾಗಿದ್ದ. ತಾನು ರಾಜನಾದಮೇಲೆ ರಾಜಧಾನಿಯನ್ನು ಪೆನುಗೊಂಡೆಯಿಂದ ಚಂದ್ರಗಿರಿಗೆ ಬದಲಾಯಿಸಿದ. ಇವನು ಸ್ವಾಮಿಯ ದೊಡ್ಡ ಭಕ್ತನಾಗಿದ್ದು ತಿರುಮಲೆಯ ಆಲಯದಲ್ಲಿ ತನ್ನ ಹಾಗೂ ತನ್ನ ತಂದೆತಾಯಿಯರ - ತಿರುಮಲ ಹಾಗೂ ವೆಂಗಳಾಂಬರ - ವಿಗ್ರಹಗಳನ್ನು ಸ್ಥಾಪಿಸಿದ. ತಿರುಮಲೆ ಹಾಗೂ ತಿರುಪತಿಗಳ ಹದ್ನಿಸಾಲ್ಕು ಶಾಸನಗಳು ಇವನನ್ನು ಹೆಸರಿಸುತ್ತವೆ.

(ಮುಂದುವರೆಯುವುದು)

ದರ್ಶಿಸಿ ! ಆನಂದಿಸಿ !

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
## ತಿರುಮಲೆ

# ಬ್ರಹ್ಮೋತ್ಸವ ಕಾರ್ಯಕ್ರಮಗಳು



14-9-96 ರಿಂದ 23-9-96 ವರೆಗೆ





| ದಿನಾಂಕ | ವಾರ | ಹಗಲು ಉತ್ಸವಗಳು | ರಾತ್ರಿ ಉತ್ಸವಗಳು |
|---|---|---|---|
| 14-9-96 | ಶನಿ | -- | ಸೇನಾಧಿಪತಿ ಉತ್ಸವ, ಅಂಕುರಾರ್ಪಣೆ |
| 15-9-96 | ಭಾನು | ತಿರುಚ್ಚಿ ಉತ್ಸವ, ಧ್ವಜಾರೋಹಣ | ದೊಡ್ಡ ಶೇಷವಾಹನ |
| 16-9-96 | ಸೋಮ | ಚಿಕ್ಕಶೇಷವಾಹನ | ಹಂಸವಾಹನ |
| 17-9-96 | ಮಂಗಳ | ಸಿಂಹವಾಹನ | ಮುತ್ತಿನಚಪ್ಪರವಾಹನ |
| 18-9-96 | ಬುಧ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 19-9-96 | ಗುರು | ಪಲ್ಲಕಿಯಲ್ಲಿ ಮೋಹಿನೀ ಅವತಾರೋತ್ಸವ | ಗರುಡೋತ್ಸವ |
| 20-9-96 | ಶುಕ್ರ | ಹನುಮದ್ವಾಹನ, ಸ್ವರ್ಣರಥ, ಸಂ|| ವಸಂತೋತ್ಸವ | ಗಜವಾಹನ |
| 21-9-96 | ಶನಿ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 22-9-96 | ಭಾನು | ರಥೋತ್ಸವ | ಅಶ್ವವಾಹನ |
| 23-9-96 | ಸೋಮ | ಪಲ್ಲಕ್ಕಿ ಉತ್ಸವ, ಚಕ್ರಸ್ನಾನ | ತಿರುಚ್ಚಿಯಲ್ಲಿ ಧ್ವಜಾವರೋಹಣೋತ್ಸವ |

ಈ ಹತ್ತುದಿನಗಳಲ್ಲಿ ತಿರುಮಲೆ ಆಸ್ಥಾನಮಂಟಪದಲ್ಲಿ ಪ್ರಮುಖ ಪಂಡಿತರಿಂದ ಧಾರ್ಮಿಕೋಪನ್ಯಾಸಗಳು, ಪುರಾಣಪ್ರವಚನಗಳು ನಡೆಯುತ್ತವೆ. ಸಂಗೀತ ಕಾರ್ಯಕ್ರಮಗಳು, ಹರಿಕಥೆ, ಭಜನ ಕಾರ್ಯಕ್ರಮಗಳೂ ಜರುಗುತ್ತವೆ.

ತಾವೂ ಬನ್ನಿ ತಮ್ಮವರನ್ನೂ ಕರೆತನ್ನಿ

ದರ್ಶಿಸಿ! ಆನಂದಿಸಿ!

## ಶ್ರೀ ವೇಂಕಟೇಶ್ವರಸ್ವಾಮಿ ದೇವಾಲಯ
## ತಿರುಮಲೆ

# ನವರಾತ್ರಿ ಬ್ರಹ್ಮೋತ್ಸವ ಕಾರ್ಯಕ್ರಮಗಳು

## 13-10-96 ರಿಂದ 21-10-96 ವರೆಗೆ





| ದಿನಾಂಕ | ವಾರ | ಹಗಲು ಉತ್ಸವಗಳು | ರಾತ್ರಿ ಉತ್ಸವಗಳು |
|---|---|---|---|
| 13-10-96 | ಭಾನು | ತಿರುಚ್ಚಿ ಉತ್ಸವ | ದೊಡ್ಡಶೇಷವಾಹನ |
| 14-10-96 | ಸೋಮ | ಚಿಕ್ಕಶೇಷವಾಹನ | ಹಂಸವಾಹನ |
| 15-10-96 | ಮಂಗಳ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 16-10-96 | ಬುಧ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 17-10-96 | ಗುರು | ಮೋಹಿನೀ ಅವತಾರೋತ್ಸವ | ಗರುಡೋತ್ಸವ |
| 18-10-96 | ಶುಕ್ರ | ಹನುಮದ್ವಾಹನ ಸಂ|| ಸುವರ್ಣರಥೋತ್ಸವ, ವಸಂತೋತ್ಸವ | ಗಜವಾಹನ |
| 19-10-96 | ಶನಿ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 20-10-96 | ಭಾನು | ರಜತರಥೋತ್ಸವ | ಅಶ್ವವಾಹನ |
| 21-10-96 | ಸೋಮ | ಪಲ್ಲಕ್ಕಿ ಉತ್ಸವ , ಚಕ್ರಸ್ನಾನ | ತಿರುಚ್ಚಿವಾಹನ, |

ಈ ಹತ್ತು ದಿನಗಳಲ್ಲಿ ತಿರುಮಲೆ ಆಸ್ಥಾನಮಂಟಪದಲ್ಲಿ ಪ್ರಮುಖ ಪಂಡಿತರಿಂದ ಧಾರ್ಮಿಕೋಪನ್ಯಾಸಗಳು, ಪುರಾಣಪ್ರವಚನಗಳು ನಡೆಯುತ್ತವೆ. ಸಂಗೀತ ಕಾರ್ಯಕ್ರಮಗಳು, ಹರಿಕಥೆ, ಭಜನ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ

# ವಾರ್ತಾಲಹರಿ

## ಅನ್ನಮಾಚಾರ್ಯ ಜಯಂತಿ

ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ತಾಳ್ಳಪಾಕ ಅನ್ನಮಾಚಾರ್ಯರ 588 ನೇ ಜಯಂತಿ ಉತ್ಸವಗಳು 1996 ರ ಮೇ ಮೂರರಿಂದ ಐದರವರೆಗೆ ನಡೆದು ಯಶಸ್ವಿಯಾದವು.

ಅನ್ನಮಾಚಾರ್ಯರ ಜನ್ಮದಿನವಾದ ಮೇ 3 ರಂದು ವೈಶಾಖ ಶುದ್ಧ ಪೂರ್ಣಿಮೆಯಂದು ತಿರುಪತಿಯ ತಿ.ತಿ.ದೇ. ಪರಿಪಾಲನಾಭವನದಿಂದ ಶ್ರೀ ವೆಂಕಟೇಶ್ವರಸ್ವಾಮಿ, ಅನ್ನಮಾಚಾರ್ಯ, ಪೆದ ತಿರುಮಲಾಚಾರ್ಯರ ಚಿತ್ರಪಟಗಳನ್ನು ಮೆರವಣಿಗೆಯಲ್ಲಿ ಶ್ರೀ ಕೋದಂಡರಾಮಾಲಯದ ಮೂಲಕ ತಿರುಪತಿಯ ಪ್ರಧಾನ ಬೀದಿಗಳಲ್ಲಿ ಸಾಗಿ ಅನ್ನಮಾಚಾರ್ಯ ಕಲಾಮಂದಿರವನ್ನು ಸೇರಿಸಲಾಯಿತು. ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರೂ, ಸ್ಥಳೀಯ ಸಂಗೀತ ಕೋವಿದರೂ ಈ ಮೆರವಣಿಗೆಯ ನಗರ ಸಂಕೀರ್ತನೆಯಲ್ಲಿ ಭಾಗವಹಿಸಿದರು. ನಂತರ ಕಲಾಮಂದಿರದಲ್ಲಿ ನಡೆದ ಸಪ್ತಗಿರಿ ಕೀರ್ತನೆಗಳ ಗೋಷ್ಠಿಗಾಯನದಲ್ಲಿ ಶ್ರೀ ಬಿ. ರಾಜಾ ಅಯ್ಯರ್, ಶ್ರೀಮತಿ ಮಣಿಕೃಷ್ಣಸ್ವಾಮಿ, ಶ್ರೀ ವೀರ ರಾಘವನ್ ಮೊದಲಾದ ವಿದ್ವಾಂಸರು ಶಿಷ್ಯಪ್ರಶಿಷ್ಯರೊಡನೆ ಪಾಲುಗೊಂಡರು. ಭಾವಮುಲೋನ ಬಾಹ್ಯಮುನಂದುನು, ಬ್ರಹ್ಮ ಕಡಿಗಿನ ಪಾದಮು, ಎಂತಮಾತ್ರಮುನ ಎವ್ವರು ದಲಚಿನ, ಪೊಡಗಂಟಿಮಯ್ಯ ನಿನ್ನು, ಕೊಂಡಲಲೋ ನೆಲಕೊನ್ನ ಕೋನೇಟಿರಾಯಡು, ನಾರಾಯಣ ತೇ ನಮೋ ನಮೋ, ಮುದ್ದುಗಾರೇ ಯಶೋದಕೂ - ಈ ಏಳೂ ಕೀರ್ತನೆಗಳೂ ಗೋಷ್ಠಿಗಾನದಲ್ಲಿ ಶ್ರೋತೃಗಳನ್ನು ಆಕರ್ಷಿಸಿದವು.

ಏರ್ಪೇಡು ವ್ಯಾಸಾಶ್ರಮದ ಉತ್ತರ ಪೀಠಾಧಿಪತಿ ಶ್ರೀ ಶ್ರೀ ಪರಿಪೂರ್ಣಾನಂದಸ್ವಾಮಿಯವರು ಅನುಗ್ರಹ ಭಾಷಣ ಸಂತರಣ ಹೊಂದಿದ ಭಕ್ತರನ್ನು ಉದಾಹರಿಸಿ, ತಿಳಿಸಿದರು. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್ ಅವರು ಸ್ವಾಮಿಜೀ ಅವರಿಗೆ ತಿರುಮಲೆಯ ಸ್ವಾಮಿಪ್ರಸಾದವನ್ನು ನೀಡಿ ಸತ್ಕರಿಸಿದರು. ನಂತರ ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾಕಾರರಿಂದ ಅಖಂಡ ಗೋಷ್ಠಿಗಾನ ನಡೆಯಿತು.

ಅಂದು ಸಂಜೆ ವಿಜಯನಗರಂನ ಶ್ರೀ ಕುಮಾರಿ ಡಿ. ವರ್ಧಿನಿ, ಅವರ ಸಂಗೀತ ಕಚೇರಿಯ ನಂತರ ತಿರುಪತಿಯ ಶ್ರೀಮತಿ ಎಂ. ಸುಶೀಲ ಅವರ ಗಾತ್ರ ಕಚೇರಿ, ನಂತರ ಶ್ರೀ ಬಿ. ರಾಜಾ ಅಯ್ಯರ್ ಅವರ ಸಂಗೀತ ಸಭೆಯೂ ಕಳೆಕಟ್ಟಿದವು.

ಮೇ 24 ರಂದು ದೆಳಗ್ಗೆ ಕಾಕಿನಾಡದ ಡಾ|| ಕೆ. ವಿ. ಎಸ್. ಮೂರ್ತಿ ಅವರು ಅನ್ನಮಾಚಾರ್ಯರ ಸಂಕೀರ್ತನಗಳಲ್ಲಿನ ತತ್ವಗಳನ್ನು ಕುರಿತು ಮಾತನಾಡಿದರು. ನಂತರ ಕುಮಾರಿ ಎಸ್.ಎಸ್. ಎಸ್. ಜ್ಯೋತಿರ್ಮಯಿ (ತಿರುಪತಿ) ಶ್ರೀಮತಿ ಕೆ. ಪದ್ಮಾವತಿ ಅವರ ಸಂಗೀತ ಕಚೇರಿಗಳು ನಡೆದವು.

ಅಂದು ಸಂಜೆ ಶ್ರೀಮತಿ ಬಿ. ಪದ್ಮಾವತಿ ಅವರ ಸಂಗೀತ ಕಚೇರಿಯಾದ ಮೇಲೆ ಶ್ರೀಮತಿ ವಿ. ಟಿ. ಎಸ್. ನೀಲಾಚಂದ್ರಶೇಖರ್ ಅವರ ಕಚೇರಿಯಾಗಿ ಕಡೆಯಲ್ಲಿ ಶ್ರೀಮತಿ ಪ್ರೇಮಾ ಹರಿಹರನ್ ಅವರು ಸಂಗೀತ ಕಚೇರಿ ನಡೆಸಿಕೊಟ್ಟರು.

ಮೇ ಐದರಂದು ಪ್ರಾತಃಕಾಲ ಶ್ರೀ ಕೋವೆಲ ಸುಪ್ರಸನ್ನಾಚಾರ್ಯರು ಅನ್ನಮಾಚಾರ್ಯರ ಸಂಕೀರ್ತನೆಗಳಲ್ಲಿ ವಿಶಿಷ್ಟಾದ್ವೈತ ಹರಿದು ಬಂದಿರುವ ಬಗೆಯನ್ನು ವಿವರಿಸಿದರು. ನಂತರ ಡಾ|| ನಂಡೂರಿ ರಾಮಕೃಷ್ಣಮಾಚಾರ್ಯರು ಅನ್ನಮಯ್ಯ ಕೀರ್ತನೆಗಳಲ್ಲಿ ಮಧುರಭಕ್ತಿ ಹೇಗೆ ವ್ಯಾಪ್ತವಾಗಿದೆಯೆಂಬುದನ್ನು ವಿವರಿಸಿದರು. ನಂತರ ಶ್ರೀ ಎಸ್.ವಿ. ರಾಮಭಟ್ಟರ್ ಅನ್ನಮಯ್ಯ ಹರಿಕಥೆಯನ್ನು ನಡೆಸಿಕೊಟ್ಟರು.

ಅಂದು ಸಂಜೆ ಶ್ರೀಮತಿ ಪದ್ಮಾಕೃಷ್ಣಮೂರ್ತಿ ಅವರಿಂದ ಗಾತ್ರಕಚೇರಿ, ನಂತರ ಕುಮಾರಿ ಸಂಗೀತಲಕ್ಷ್ಮಿ ಕುಮಾರಿ ಜ್ಯೋತಿರ್ಮಯಿಯರ ಸಂಗೀತ, ನಂತರ ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರಿಂದ ಸಂಗೀತಗಳು ನಡೆದವು.

## ಮದರಾಸಿನಲ್ಲಿ, ಅನ್ನಮಯ್ಯ ಆರಾಧನೆ

ಮದರಾಸಿನ ವೆಂಕಟನಾರಾಯಣ ರಸ್ತೆಯಲ್ಲಿರುವ ತಿ.ತಿ.ದೇ. ಸಮಾಚಾರ ಕೇಂದ್ರದಲ್ಲಿ ದಿನಾಂಕ 23-5-96 ರಂದು ಶುಕ್ರವಾರ ಸಂಜೆ. ಅನ್ನಮಾಚಾರ್ಯರ 588 ನೇ ಜಯಂತಿ ಉತ್ಸವವನ್ನು ನಡೆಸಲಾಯಿತು. ತಿ.ತಿ.ದೇ. ಸಮಾಚಾರ ಕೇದ್ರದಲ್ಲಿ ಅರ್ಚನೆ, ಪ್ರಸಾದ ವಿನಿಯೋಗವಾದ ನಂತರ ಖ್ಯಾತ ಗಾಯಕಿ ಶ್ರೀಮತಿ ಶೋಭರಾಜು ಅವರು ಅನ್ನಮಾಚಾರ್ಯ ಸಂಕೀರ್ತನೆಗಳನ್ನು ಹಾಡಿ ಸಭೆಯನ್ನು ರಸಮುಗ್ಧರನ್ನಾಗಿಸಿದರು. ಅಸಂಖ್ಯ ಸಂಗೀತಾಭಿಮಾನಿಗಳೂ, ಭಕ್ತರೂ ಭಾಗವಹಿಸಿದ್ದರು.

## ಸ್ವಾಮಿ ಶಿಖರ ದರ್ಶನ ಆರಂಭ

ತಿರುಮಲೆಯಲ್ಲಿನ ಅರಣ್ಯವಿಭಾಗಾಧಿಕಾರದವರು ಏರ್ಪಡಿಸಿರುವ ಶ್ರೀ ವೆಂಕಟೇಶ್ವರಸ್ವಾಮಿ ವಿಮಾನಗೋಪುರ ದರ್ಶನ ಮಾಡಿಸುವ ಶಿಖರ ದರ್ಶಿನಿಯನ್ನು ಮೇ ತಿಂಗಳ ಮೂರರಂದು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶಕುಮಾರ್ ಅವರು ಆರಂಭಿಸಿದರು. ಇಲ್ಲಿಂದ ಎತ್ತರದಲ್ಲಿ ನಿಂತು (ಈ ಸ್ಥಳವಿರುವುದು ಆಲಯದ ಉತ್ತರಕ್ಕಿರುವ ಭೌಗೋಳಿಕ ಶಿಲಾತೋರಣದ ಬಳಿ) ಸ್ವಾಮಿಯ ಆನಂದ ನಿಲಯ ವಿಮಾನವನ್ನೂ ಇತರ ರಮಣೀಯ ದೃಶ್ಯಗಳನ್ನೂ ಕಾಣಬಹುದು. ತಿರುಮಲೆಯಲ್ಲಿನ ಪದ್ಮಾವತೀ ಅತಿಥಿಗೃಹ, ಪಾಪನಾಶನಂಗಳಲ್ಲಿಯೂ ಇಂತಹ ಶಿಖರದರ್ಶಿನಿಗಳನ್ನು ಏರ್ಪಾಡು ಮಾಡುವ ಯೋಜನೆಯಿದೆ ಎಂದು ತಿಳಿಸಲಾಗಿದೆ. ಕಾರ್ಯಕ್ರಮದಲ್ಲಿ ತಿರುಮಲೆಯ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಅರಣ್ಯ ಸಂರಕ್ಷಣಾಧಿಕಾರಿ ಶ್ರೀ ವೆಂಕಟ್ರಾಮಯ್ಯ ಡಿ. ಎಫ್. ಓ. ಶ್ರೀ ಬಿ. ವಿ. ಸುಬ್ಬಾರೆಡ್ಡಿ ಮತ್ತಿತರರು ಭಾಗವಹಿಸಿದ್ದರು.

## ಸ್ವಾಮಿ ಸೇವೆಯಲ್ಲಿ ಪದೋನ್ನತಿ

ತಿರುಮಲ ತಿರುಪತಿ ದೇವಸ್ಥಾನಗಳಲ್ಲಿ ಸ್ವಾಮಿ ಸೇವೆಯಲ್ಲಿ ಎ.ಇ.ಓ. ಪದವಿಯಲ್ಲಿ ಕೆಲಸಮಾಡುತ್ತಿದ್ದು ಎಸ್ಟಾಬ್ಲಿಷ್‌ಮೆಂಟ್‌ನ ಶ್ರೀ ಎ. ಸುಬ್ರಹ್ಮಣ್ಯಂ ಅವರನ್ನು ತಿರುಮಲೆಯ ಸ್ವಾಗತದ ಡೆ.ಇ.ಓ. ಪದವಿಗೆ ಬಢತಿ ನೀಡಿ ನೇಮಿಸಲಾಗಿದೆ. ಪರಿಪಾಲನಾ ವಿಭಾಗದಲ್ಲಿ ಎ.ಇ.ಓ. ಆಗಿದ್ದ ಕುಮಾರಿ ಜೆ. ಶ್ರೀವಳ್ಳಿ ಅವರನ್ನು ಸ್ವಾಮಿ ಆಲಯದ ಪರಕಾಮಣಿ ವಿಭಾಗದ ಡೆ.ಇ.ಓ. ಆಗಿ ಬಢತಿ ನೀಡಿ ನೇಮಿಸಲಾಗಿದೆ. ಇನ್‌ಸ್ಪೆಕ್ಷನ್ ವಿಭಾಗದಲ್ಲಿ ಡೆಪ್ಯೂಟಿ ಇ.ಓ. ಆಗಿದ್ದು ಶ್ರೀ ಈ ಗುರವಯ್ಯ ಅವರನ್ನು ವಿಶೇಷಧರ್ಜೆಯ ಡೆ.ಇ.ಓ. ಆಗಿ ಬಢತಿ ನೀಡಿ ಶ್ರೀ ವೆಂಕಟೇಶ್ವರ ನಿತ್ಯಾನ್ನದಾನಯೋಜನೆಯಲ್ಲಿ ನಿಯಮಿಸಲಾಗಿದೆ. ಎ.ಇ.ಓ. ಆಗಿದ್ದ ಕುಮಾರಿ ಸಾವಿತ್ರಿ ಅವರನ್ನು ಟ್ರೆಷರಿ ವಿಭಾಗದ ಡೆ.ಇ.ಓ. ಆಗಿ ಬಢತಿನೀಡಿ ನೇಮಿಸಲಾಗಿದೆ. ಇಲ್ಲಿಯೇ ಎ.ಇ.ಓ. ಆಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಪರಮಹಂಸ ಅವರನ್ನು ಇನ್ಸ್‌ಪೆಕ್ಷನ್ ವಿಭಾಗದ ಡೆ.ಇ.ಓ. ಆಗಿ ಬಢತಿ ನೀಡಿ ನೇಮಿಸಲಾಗಿದೆ. ಪದವಿಯಿಂದ ಹಲವಾರು ಮಂದಿ ಒಟ್ಟಿಗೆ ನಿವೃತ್ತರಾಗಿದ್ದರಿಂದ ಈ ಮೇಲ್ದರ್ಜೆಯ ಪದವಿಗಳನ್ನು ಬಢತಿ ನೀಡುವುದರ ಮೂಲಕ ತುಂಬಿಸಲಾಗಿದೆ.

## ತಿರುಮಲೆಯಲ್ಲಿ ಮಾಜೀ ಪ್ರಧಾನಿ ಶ್ರೀ ನರಸಿಂಹರಾವ್

ಭಾರತದ ಮಾಜೀ ಪ್ರಧಾನಮಂತ್ರಿ ಶ್ರೀ ಪಿ.ವಿ. ನರಸಿಂಹರಾವ್ ಅವರು ಮೇ ತಿಂಗಳ ಮೊದಲವಾರದಲ್ಲಿ (ಆಗ್ಗೆ ಅವರು ಇನ್ನೂ ಪ್ರಧಾನಿಗಳಾಗಿಯೇ ಇದ್ದರು) ತಿರುಮಲೆಗೆ ಆಗಮಿಸಿ ಸ್ವಾಮಿ ಸೇವೆಯಲ್ಲಿ ಪಾಲುಗೊಂಡರು.

ಸ್ವಾಮಿಯನ್ನು ಸಂದರ್ಶಿಸಿದ ಪ್ರಧಾನ ಮಂತ್ರಿಗಳನ್ನು ಆಲಯ ಮರ್ಯಾದೆಗಳಂತೆ ಸ್ವಾಗತಿಸಲಾಯಿತು. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶಕುಮಾರ್, ಜೆ. ಇ. ಓ. ಶ್ರೀ ಬಾಲಸುಬ್ರಹ್ಮಣ್ಯಂ, ಮೊದಲಾದವರು ಸ್ವಾಗತಿಸಿದರು. ಅವರಿಗೆ ಸ್ವಾಮಿಯ ಶೇಷ ವಸ್ತ್ರಗಳನ್ನು ಬಹೂಕರಿಸಲಾಯಿತು. ರಂಗನಾಯಕ ಮಂಟಪದಲ್ಲಿ ವೇದಾಶೀರ್ವಚನವನ್ನೂ ಪ್ರಸಾದವನ್ನೂ ನೀಡಲಾಯಿತು.



## ಧರ್ಮೋಪನಯನಗಳು

ದಿನಾಂಕ : 5-5-1996 ರಂದು ಸುಣ್ಣದ ಹಳ್ಳಿ ಆಂಜನೇಯ ಸ್ವಾಮಿ ಸನ್ನಿಧಿಯಲ್ಲಿ ಶ್ರೀ ಸಂಕರ್ಷಣ ಧರ್ಮ ಸಂಸ್ಥೆಯಿಂದ 11 ಧರ್ಮೋಪನಯನಗಳು ವೇ. ಶ್ರೀ ಸಿ. ಆರ್. ಗೋಪಾಲಕೃಷ್ಣಾಚಾರ್ಯ ಹಾಗೂ ವೇ. ಶ್ರೀ ಘಂಟಿ ನಾರಾಯಣಾಚಾರ್ಯರ ನೇತೃತ್ವದಲ್ಲಿ ಜರುಗಿದ್ದವು. ಋತ್ವಿಜರು ನೂತನ ವಟುಗಳಿಗೆ ಬ್ರಹ್ಮಚಾರಿ ಆಶ್ರಮದ ಆಚರಣೆ ಅನುಸರಿಸುವ ಬಗ್ಗೆ ಮಾರ್ಗದರ್ಶನ ನೀಡಿ ಆಶೀರ್ವದಿಸಿದರು. ಸಂಸ್ಥೆಯ ಅಧ್ಯಕ್ಷರಾದ ಹೆಚ್. ಎಸ್. ಹನುಮಂತರಾವರವರು ಋತ್ವಿಜರಿಗೆ ಸನ್ಮಾನಿಸಿದರು. ಪ್ರಧಾನ ಕಾರ್ಯದರ್ಶಿ ಎನ್. ಆರ್. ತಮ್ಮಯ್ಯನವರು ಋತ್ವಿಜರಿಗೆ ಹಾಗೂ ಭಾಗವಹಿಸಿದ ಭಕ್ತ ಸಮೂಹಕ್ಕೆ ಅಭಿವಂದಿಸಿದರು.

# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು. (೨ ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ ೬--೦೦, ಬೆಳಗ್ಗೆ ೧೧--೦೦, ಸಂಜೆ ೩--೦೦

ಬಸ್ ಪ್ರಯಾಣದ ದರ : ಒಂದು ಟಿಕೆಟ್ಟಿಗೆ ೨೦ ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ. **ತಿ. ತಿ. ದೇ.**

## ತಿರುಮಲೆಯಲ್ಲಿ ರಾಷ್ಟ್ರಪತಿ

ಭಾರತದ ರಾಷ್ಟ್ರಪತಿ ಶಂಕರದಯಾಳ ಶರ್ಮ ಅವರು ಸಕುಟುಂಬರಾಗಿ ತಿರುಮಲೆಗೆ ಮೇ 25 ರ ಶನಿವಾರ ಆಗಮಿಸಿ ಸ್ವಾಮಿ ಸೇವೆಯಲ್ಲಿ ಪಾಲುಗೊಂಡರು.

ಮೇ 25 ರಂದು ಮಧ್ಯಾಹ್ನ ತಿರುಮಲೆಯ ಪದ್ಮಾವತೀ ಅತಿಥಿಗೃಹ ಸೇರಿದ ರಾಷ್ಟ್ರಪತಿಗಳನ್ನು ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಚಂದ್ರಬಾಬುನಾಯುಡು ಮತ್ತಿತರರು ಸ್ವಾಗತಿಸಿದರು. ಅಲ್ಲಿ ತಲೆಗೂದಲನ್ನು ಅರ್ಪಿಸಿದ ಬಳಿಕ ರಾಷ್ಟ್ರಪತಿಗಳು ಸಂಜೆ ಆಲಯಕ್ಕೆ ಆಗಮಿಸಿದಾಗ ಅವರಿಗೆ ಇಸ್ತಿಕಪಾಲ್ ಸ್ವಾಗತ ದೊರೆಯಿತು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಮೊದಲಾದವರು ಆಲಯ ಪುರೋಹಿತರೂ ರಾಷ್ಟ್ರಪತಿ ಕುಟುಂಬವನ್ನು ಸ್ವಾಗತಿಸಿದರು.







ಸ್ವಾಮಿದರ್ಶನಾನಂತರ ರಾಷ್ಟ್ರಪತಿಗಳಿಗೆ ಸ್ವಾಮಿ ಶೇಷವಸ್ತ್ರವನ್ನು ಬಹೂಕರಿಸಿ ಗೌರವಿಸಲಾಯಿತು. ರಂಗನಾಯಕ ಮಂಟಪದಲ್ಲಿ ಅವರಿಗೆ ವೇದಾಶೀರ್ವಚನ ನೀಡಲಾಯಿತು. ತಿರುಮಲೆಯ ಸ್ವಾಮಿ ಪ್ರಸಾದಗಳನ್ನು ನೀಡಲಾಯಿತು.

ಭಾನುವಾರ ಮೇ 26 ರಂದು ಬೆಳಗ್ಗೆ ರಾಷ್ಟ್ರಪತಿ ದಂಪತಿಗಳು ಸ್ವಾಮಿಯ ಸುಪ್ರಭಾತ, ಅರ್ಚನೆ ತೋಮಾಲೆ ಸೇವೆಯಲ್ಲಿ ಪಾಲುಗೊಂಡಿದ್ದರು. ನಂತರ ಬೆಳಗ್ಗೆ 9 ಗಂಟೆಯ ಹೊತ್ತಿಗೆ ಅವರು ತಿರುಮಲೆಯಿಂದ ತಿರುಚಾನೂರಿಗೆ ಆಗಮಿಸಿ ಶ್ರೀ ಪದ್ಮಾವತೀ ಅಮ್ಮನವರ ಆಲಯವನ್ನು ಸಂದರ್ಶಿಸಿ ಅಮ್ಮನವರನ್ನು ಸೇವಿಸಿದರು. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್, ಜೆ.ಇ.ಓ. ಶ್ರೀ ಸತ್ಯನಾರಾಯಣರಾವ್, ಎಂ.ಎಲ್.ಎ. ಮೋಹನ್ ಮತ್ತಿತರರು ಸ್ವಾಗತಿಸಿದರು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ರಾಷ್ಟ್ರಪತಿಗಳಿಗೆ ಶೇಷವಸ್ತ್ರವನ್ನೂ ಪ್ರಸಾದಗಳನ್ನೂ ನೀಡಿದರು.

## ವೇದ ನಾದಾಮೃತ - ಬಿಡುಗಡೆ

ತಿರುಮಲೆಯಲ್ಲಿ ಭಾರತದ ರಾಷ್ಟ್ರಪತಿ ಶಂಕರ ದಯಾಳ ಶರ್ಮರು ತಿ.ತಿ.ದೇ. ತಯಾರಿಸಿದ ವೇನಾದಾಮೃತಮು - ಕ್ಯಾಸೆಟ್ ಗುಚ್ಛವನ್ನು ಬಿಡುಗಡೆ ಮಾಡಿದರು. ನಾಲ್ಕು ವೇದಗಳ ಸೂಕ್ತಿಗಳಿರುವ ಈ ನಾಲ್ಕು ಧ್ವನಿಸುರುಳಿಗಳನ್ನು ತಿ.ತಿ.ದೇ. ಆಸ್ಥಾನಪಂಡಿತ ಶ್ರೀ ಮಾಡಬಾಕಂ ಶ್ರೀನಿವಾಸ ಭಟ್ಟಾಚಾರ್ಯರ ನೇತೃತ್ವದಲ್ಲಿ ತಿ.ತಿ.ದೇ. ರೆಕಾರ್ಡಿಂಗ್ ಪ್ರಾಜೆಕ್ಟ್ ಎ.ವಿ.ಎಂ. ಸಂಸ್ಥೆಯ ಸಹಕಾರದಿಂದ ನಿರ್ಮಿಸಿದೆ. ಪ್ರೊ|| ಎಸ್. ಕೆ. ರಾಮಚಂದ್ರರಾಯರು ಬರೆದ ವಿವರಣೆಯ ಪುಸ್ತಿಕೆಯನ್ನೂ ಧ್ವನಿಸುರುಳಿಗಳೊಡನೆ ರಾಷ್ಟ್ರಪತಿಗಳು ಬಿಡುಗಡೆ ಮಾಡಿ ಶ್ರೀ ಮಾಡಬಾಕಂ ಶ್ರೀನಿವಾಸ ಭಟ್ಟಾಚಾರ್ಯರನ್ನು ಸನ್ಮಾನಿಸಿದರು. ಧ್ವನಿಸುರುಳಿಗಳನ್ನು ಕೊಂಡವರಿಗೆ ಈ ಪುಸ್ತಕವನ್ನು ಉಚಿತವಾಗಿ ನೀಡಲಾಗುವುದು. ಸಂದರ್ಭದಲ್ಲಿ ತಿ.ತಿ.ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್, ಜೆ.ಇ.ಓ. ಬಾಲಸುಬ್ರಹ್ಮಣ್ಯಂ ಮತ್ತಿತರರು ಪಾಲುಗೊಂಡಿದ್ದರು. ಆಂಧ್ರಪ್ರದೇಶದ ಮುಖ್ಯ ಮಂತ್ರಿ ಶ್ರೀ ಎನ್. ಚಂದ್ರಬಾಬು ನಾಯುಡು ಅವರು ತಮ್ಮ ಧರ್ಮಪತ್ನಿ ಶ್ರೀಮತಿ ಭುವನೇಶ್ವರಿ ಅವರೊಡನೆ ಭಾಗವಹಿಸಿ ರಾಷ್ಟ್ರಪತಿಗಳಿಗೆ ಚಂದನದ ಗೀತೋಪದೇಶದ ದೊಂದೆಯನ್ನು ಅವರ ಪತ್ನಿಗೆ ಹಿತ್ತಾಳೆಯ ಅಷ್ಟಲಕ್ಷ್ಮೀ ಚಿತ್ರವನ್ನೂ ಕಾಣಿಕೆಯಾಗಿ ನೀಡಿದರು.

## ತಿರುಮಲೆಯಲ್ಲಿ ಮುಖ್ಯಮಂತ್ರಿ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎಸ್. ಚಂದ್ರಬಾಬುನಾಯುಡು ಅವರು ತಮ್ಮ ಧರ್ಮ ಪತ್ನಿ ಶ್ರೀಮತಿ ಭುವನೇಶ್ವರಿ ಪುತ್ರ ಚಿ. ಲೋಕೇಶ್ ಅವರೊಡನೆ ಮೇ 25 ರಂದು ಶನಿವಾರ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ರಾಷ್ಟ್ರಪತಿಗಳನ್ನು ತಿರುಮಲೆಗೆ ಸ್ವಾಗತಿಸಿದ ನಂತರ ಮುಖ್ಯಮಂತ್ರಿ ದಂಪತಿಗಳು ಪತ್ನಿ ಪುತ್ರರೊಡನೆ ಆಲಯಕ್ಕೆ ಆಗಮಿಸಿದಾಗ ಅವರಿಗೆ ತಿ.ತಿ.ದೇ. ಇ.ಓ.ಶ್ರೀ ಎಸ್. ರಮೇಶಕುಮಾರ್, ವೇದಪಂಡಿತರೊಡನೆ ಮಹಾದ್ವಾರದಲ್ಲಿ ಸಾಂಪ್ರದಾಯಕವಾಗಿ ಸ್ವಾಗತಿಸಿದರು. ದರ್ಶನಾನಂತರ ಮುಖ್ಯಮಂತ್ರಿಗಳಿಗೆ ಶೇಷವಸ್ತ್ರವನ್ನೂ ಪ್ರಸಾದವನ್ನೂ ನೀಡಲಾಯಿತು.

ದೇವಾಲಯದಿಂದ ಹೊರಬರುವಾಗ ಸರತಿಯ ಸಾಲಿನಲ್ಲಿದ್ದ ಯಾತ್ರಿಕರನ್ನು ಮಾತನಾಡಿಸಿದ ಮುಖ್ಯಮಂತ್ರಿಗಳು ಅವರ ಅಗತ್ಯಗಳ, ಅನುಕೂಲಗಳ ಬಗ್ಗೆ ವಿಚಾರಿಸುತ್ತ ತಿರುಮಲೆಯಲ್ಲಿನ ನೀರಿನ ಕೊರತೆಯನ್ನು ಮನಗಂಡು, ಕಾರ್ಯನಿರ್ವಹಣಾಧಿಕಾರಿ ಯವರೊಡನೆ ಮಾತನಾಡಿ ನೀರಿನ ಪೂರೈಕೆ ಸರಿಪಡಿಸಲು ಸಲಹೆನೀಡಿದರು.



ಓದಿರಿ ಓದಿಸಿರಿ

## ಮುಂದಿನ ಸಂಚಿಕೆಯಲ್ಲಿ

### ಸಪ್ತಗಿರಿ

### ಜುಲೈ 1996

ಯಾಮುನಾಚಾರ್ಯರು ಆಳವಂದಾರ್ ಎಂದೇ ಪ್ರಸಿದ್ಧರಾದವರು. ವಿಶಿಷ್ಟಾದ್ವೈತದ ಪರಮ ಪರಿವ್ರಾಜಕಾಚಾರ್ಯ ರಾಮಾನುಜರಿಗೆ ಪರೋಕ್ಷ ಗುರುಗಳಾಗಿದ್ದವರು. ಸಾವಿರ ವರ್ಷಗಳುರುಳಿದ ಮೇಲೂ ಪ್ರಸ್ತುತರಾಗಿರುವ ಅವರ ನೆನಪಿನಲ್ಲಿ ಅವರ ಜೀವನ ಸಾಹಿತ್ಯವನ್ನು ಪರಿಚಯಿಸಿ ಕೊಡುವ ಪ್ರಯತ್ನದಲ್ಲಿ ಜುಲೈ 1996 ಸಂಚಿಕೆ ಹೊರಬರಲಿದೆ.

ಸಂಗ್ರಹಯೋಗ್ಯವಾದ ಈ ಸಂಚಿಕೆಯನ್ನು ತಮ್ಮ ಮನೆಗೆ ಮನಕ್ಕೆ ಬರಮಾಡಿಕೊಳ್ಳಿ.

ಕೊಳ್ಳಿರಿ ಕೊಂಡು ಓದಿಸಿರಿ

ಬಿಡಿಪ್ರತಿ ರೂ. 4/- ಮಾತ್ರ. ವಾರ್ಷಿಕ ಚಂದಾ ರೂಪಾಯಿ ನಲವತ್ತೆಂಟು ಮಾತ್ರ. ವಾರ್ಷಿಕ ಚಂದಾ ಹಣವನ್ನು ಎಂ. ಓ. ಅಥವಾ ಡಿ.ಡಿ.ಯ ಮೂಲಕ ತಾವು ಸಂಪಾದಕರು, ಸಪ್ತಗಿರಿ, ತಿ.ತಿ.ದೇ., ತಿರುಪತಿ - 517 507 - ಕಳುಹಿಸಬಹುದು. ದಯವಿಟ್ಟು ತಮ್ಮ ವಿಳಾಸವನ್ನು ಸ್ಪಷ್ಟ ಖಚಿತ ಅಕ್ಷರಗಳಲ್ಲಿ ವಿವರವಾಗಿ ಬರೆಯಿರಿ.

## ತಿಂಗಳಿನ ಮುಖ್ಯದಿನಗಳು

### ಜುಲೈ --- 1996

5. ಶುಕ್ರವಾರ :
ತಿರುಚಾನೂರು
ಶ್ರೀ ಸುಂದರರಾಜಸ್ವಾಮಿ
ಅವತಾರೋತ್ಸವಾರಂಭ.

7. ಭಾನುವಾರ :
ತಿರುಚಾನೂರು
ಶ್ರೀ ಸುಂದರರಾಜಸ್ವಾಮಿ
ಅವತಾರೋತ್ಸವ ಸಮಾಪ್ತಿ.

11. ಗುರುವಾರ :
ಆಂಡಾಳ್ ತಿರುವಾಡಿಪ್ಪೂರಂ.
ಉತ್ಸವಾರಂಭ.

16. ಮಂಗಳವಾರ :
ದಕ್ಷಿಣಾಯನಾರಂಭ.
ಆನಿವರ ಆಸ್ಥಾನ.

17. ಬುಧವಾರ :
ಪೂರಿ ಜಗನ್ನಾಥ ರಥೋತ್ಸವ.

19. ಶುಕ್ರವಾರ :
ನಾಗಚತುರ್ಥಿ.

20. ಶನಿವಾರ :
ಗರುಡಪಂಚಮಿ
ಆಂಡಾಳ್ ತಿರುವಾಡಿಪ್ಪೂರಂ ಸಮಾಪ್ತಿ.

21. ಭಾನುವಾರ :
ಶ್ರೀ ವಿಖನಸಾಚಾರ್ಯರ
ಉತ್ಸವಾರಂಭ.

25. ಗುರುವಾರ :
ತಿರುಪತಿಯಲ್ಲಿ.
ಶ್ರೀ ಗೋವಿಂದರಾಜಸ್ವಾಮಿ.
ಜ್ಯೇಷ್ಠಾಭಿಷೇಕ ಆರಂಭ.

27. ಶನಿವಾರ :
ತಿರುಪತಿಯಲ್ಲಿ.
ಶ್ರೀ ಗೋವಿಂದರಾಜಸ್ವಾಮಿ.
ಜ್ಯೇಷ್ಠಾಭಿಷೇಕ ಸಮಾಪ್ತಿ.

30. ಮಂಗಳವಾರ :
ಆಳವಂದಾರ್ ವರ್ಷತಿರುನಕ್ಷತ್ರ.

31. ಬುಧವಾರ :
ಶ್ರೀ ವಿಖಾನಸಾಚಾರ್ಯರ
ಶಾತ್ತುಮೊರೆ.

Published on behalf of T. T. Devasthanams by N. S. Ramamurthy, M.A., Editor and
Printed at T.T.D. Press by P. Mohan Rao, Manager, T.T.D. Press, Tirupati - 517 507

